


# ಕರ್ನಾಟಕ ಸ್ಕೌಟ್ ಮತ್ತು ಗೈಡ್

## KARNATAKA SCOUT & GUIDE

News Magazine

VOL.3 FEBRUARY 2003 No. 2


ಗದಗಿನಲ್ಲಿ ನಡೆದ **ರಾದ್ಯಮಟ್ಟದ ೨೬ನೇ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವದ** ಸಂದರ್ಭದಲ್ಲಿ ಮಾನ್ಯ **ಶ್ರೀ ಹೆಚ್.ಕೆ. ಪಾಟೀಲ್** ಜನ ಸಂಪನ್ಮೂಲ ಸಚಿವರು, ಕರ್ನಾಟಕ ಸರ್ಕಾರ ಇವರು ಮಾತನಾಡುತ್ತಿರುವುದು. **ಶ್ರೀ ಮಹಮದ್ ಜಹೀರುದ್ದೀನ್**, ರಾಜ್ಯ ಆಯುಕ್ತರು (ಸ್ಕೌಟ್ಸ್), **ಶ್ರೀ ಸಂಜಯ್ ವೀರ್‌ಸಿಂಗ್**, ಜಿಲ್ಲಾ ಪೋಲೀಸ್ ಅಧೀಕ್ಷಕರು, **ಶ್ರೀ ಹುಮಾಯೂನ್ ಮಾಗಡಿ**, ಶಿರಹಟ್ಟಿ ಪಟ್ಟಣ ಪಂಚಾಯತಿ ಅಧ್ಯಕ್ಷರು, **ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ**, ರಾಜ್ಯ ಮುಖ್ಯ ಆಯುಕ್ತರು, **ಶ್ರೀ ಪಿ.ಸಿ. ಕಾಮತ್**, ಅಧ್ಯಕ್ಷರು, ಹೋಟೆಲ್ ಒಡೆಯರ ಸಂಘ ಮತ್ತು **ಶ್ರೀ ಎಸ್.ಜಿ. ಪಾಟೀಲ್**, ಪ್ರಾಂಶುಪಾಲರು, ಮುನಿಸಿಪಲ್ ಪದವಿಪೂರ್ವ ಕಾಲೇಜು ಇವರನ್ನೂ ಸಹ ಚಿತ್ರದಲ್ಲಿ ಕಾಣಬಹುದು.




**ಕರ್ನಾಟಕ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್**
**೮೫ ವರ್ಷಗಳ ಪರಿಪೂರ್ಣ ಸೇವೆಯಲ್ಲಿ**

**1917-2003**


ಪ್ರಕಾಶಕರು : ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

# ಪೋಷಕರಿಗೆ ಸಂದೇಶ

**ನಿಮ್ಮ ಹುಡುಗ / ಹುಡುಗಿ ಸ್ಕೌಟ್ / ಗೈಡ್ ಆಗಬೇಕು. ಏಕೆಂದರೆ,**



1, ಸ್ಕೌಟ್ / ಗೈಡ್ ಶಿಕ್ಷಣವು - ನಿಮ್ಮ ಹುಡುಗ / ಹುಡುಗಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಮಾಡುತ್ತದೆ.

2, ಸ್ಕೌಟ್ / ಗೈಡ್ ಶಿಕ್ಷಣವು - ಹುಡುಗ / ಹುಡುಗಿಯರ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುವುದಲ್ಲದೆ ಅವರ ಯಾವುದೇ ವೃತ್ತಿಯಲ್ಲಿ ಯಶಸ್ಸನ್ನು ಕೊಡುವುದು.

3, ಸ್ಕೌಟ್ / ಗೈಡ್ - ಇದು ಸೈನಿಕ ಚಳುವಳಿಯಲ್ಲ. ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸಹೊರಟಿದ್ದೇವೆಯೇ ವಿನಃ ಅನುಕರಣೆಯ ಸಿಪಾಯಿಗಳ ಒಂದು ತಂಡವನ್ನಲ್ಲ.

4, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.

5, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತವೆ.

6, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.

7, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.

8, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಆರೋಗ್ಯ ತಂದುಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸನ್ನು ಗಳಿಸುತ್ತಾರೆ.

9, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ. ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.

10, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸಂತೋಷ ನೀಡುತ್ತದೆ. ಹರ್ಷೋತ್ಸಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.

11, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ಸುಸಂಸ್ಕೃತ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟುಕೊಂಡಿವೆ.

12, ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯನ್ನು ಯೋಗ್ಯ ವ್ಯಕ್ತಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.

**- ಬೇಡನ್ ಪೋವೆಲ್**




# ಕರ್ನಾಟಕ ಸ್ಕೌಟ್ ಮತ್ತು ಗೈಡ್
# KARNATAKA SCOUT AND GUIDE

## STATE MONTHLY NEWS MAGAZINE

Vol - 3 February - 2003 No.2




**ಪರಿವಿಡಿ**



***Wake up! Get Busy! You have only one life - day to Live,***
***So make the best of every minute of it.***

***- Lord Baden Powell***

# ರಾಜ್ಯ ಮುಖ್ಯ ಆಯುಕ್ತರ ನುಡಿ



ಮಾನ್ಯರೆ,

ಜನವರಿ ೨೭ ರಿಂದ ೩೧ ರವರೆಗೆ ಗದುಗಿನಲ್ಲಿ ಜರುಗಿದ ೨೬ನೇ ಕಬ್ ಬುಲ್ ಬುಲ್ ಉತ್ಸವ ಅತ್ಯಂತ ಯಶಸ್ವಿಯಾಗಿತ್ತು. ಉತ್ಸವದಲ್ಲಿ ಭಾಗವಹಿಸಿದ ೧೨೦೦ ಕ್ಕೂ ಹೆಚ್ಚು ಕಬ್ ಬುಲ್ ಬುಲ್‌ಗಳು ಅತ್ಯಂತ ಸಡಗರ, ಉತ್ಸಾಹದಿಂದ ಎಲ್ಲಾ ಚಟುವಟಿಕೆಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡು ತಮ್ಮ ಸ್ಥಳಗಳಿಗೆ ಹಿಂತಿರುಗಿದ್ದಾರೆ.

ಗದಗ್ ಜಿಲ್ಲಾಧಿಕಾರಿಗಳಾದ ಶ್ರೀ ವಿ.ಆರ್. ಪಟೇಲ್, ಭಾ.ಆ.ಸೇ., ಜಿಲ್ಲಾ ಪಂಚಾಯ್ತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಶ್ರೀಕಾಂತ್ ವಾಲಗದ, ಭಾ.ಆ.ಸೇ. ಹಾಗೂ ಗದಗ್-ಬೆಟಗೇರಿ ನಗರಸಭೆ ಅಧ್ಯಕ್ಷರು, ಆಯುಕ್ತರು ಹಾಗೂ ನೌಕರವರ್ಗದವರು ಹಾಗೂ ಗದಗ್ ಮತ್ತು ಸುತ್ತಮುತ್ತಲಿನ ಸಹೃದಯಿ ಬಂಧುಗಳು ಮಕ್ಕಳ ಈ ಉತ್ಸವವನ್ನು ಯಶಸ್ವಿಯಾಗಿ ಜರುಗಿಸಿ ಪುಟಾಣಿಗಳು ಸಂತೋಷದಿಂದ ನಲಿದು, ಕುಣಿದು, ಕುಪ್ಪಳಿಸುವಂತೆ ಮಾಡಿರುತ್ತಾರೆ. ರಾಜ್ಯ, ಜಿಲ್ಲಾ ಹಾಗೂ ತಾಲ್ಲೂಕು ಸಂಸ್ಥೆಗಳ ಪದಾಧಿಕಾರಿಗಳು ಹಾಗೂ ಸಂಸ್ಥೆಯ ನೂರಾರು ಸ್ವಯಂ ಸೇವಕರು ಉತ್ಸವದಲ್ಲಿ ತಮ್ಮನ್ನು ತಾವೇ ಸಂಪೂರ್ಣವಾಗಿ ತೊಡಗಿಸಿಕೊಂಡು - ಜಿಲ್ಲೆಯಾದ್ಯಂತ ಸಂಸ್ಥೆಯ ಕಾರ್ಯ ಚಟುವಟಿಕೆಗಳು ಪ್ರಚಾರವಾಗುವಲ್ಲಿ ಸಕ್ರಿಯವಾಗಿ ತಮ್ಮ ಪಾಲಿನ ಸೇವೆ ಸಲ್ಲಿಸಿರುತ್ತಾರೆ. ಇವರುಗಳಿಗೆಲ್ಲಾ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಧನ್ಯವಾದಗಳು.

ದಿನಾಂಕ ೭.೨.೨೦೦೩ ರಂದು ರಾಜ್ಯ ಸಂಸ್ಥೆಯ ಸಹಾಯಕ ಸಂಘಟನಾ ಆಯುಕ್ತರುಗಳು / ಜಿಲ್ಲಾ ಸಂಘಟನಾ ಆಯುಕ್ತರುಗಳು ಹಾಗೂ ರಾಜ್ಯ ಸಂಸ್ಥೆಯ ಪದಾಧಿಕಾರಿಗಳ ಸಭೆ ಜರುಗಿತು. ಸಭೆಯಲ್ಲಿ ತರಬೇತಿ ಕಾರ್ಯಕ್ರಮಗಳ ಹಾಗೂ ಘಟಕಗಳ ನೋಂದಣಿ ಹಾಗೂ ನವೀಕರಣಗಳ ಬಗ್ಗೆ ಚರ್ಚೆ ನಡೆಸಿ, ಈ ಸಾಲಿನಲ್ಲಿ ರಾಜ್ಯ ಸಂಸ್ಥೆ ಹಾಕಿಕೊಂಡಿರುವ ಗುರಿ ಸಾಧಿಸುವ ಬಗ್ಗೆ ವಿಪುಲವಾಗಿ ಚಿಂತಿಸಲಾಯಿತು. ಸಭೆಯಲ್ಲಿ ಭಾಗವಹಿಸಿದ ಎಲ್ಲರೂ ತಮ್ಮ ತಮ್ಮ ಜಿಲ್ಲೆಯ ಘಟಕಗಳ ನೋಂದಣಿ/ನವೀಕರಣಗಳ ಗುರಿ ತಲುಪುತ್ತೇವೆಂಬ ಭರವಸೆ ಹೊಂದಿದ್ದಾರೆ.

ದಿನಾಂಕ ೯.೨.೨೦೦೩ ರಂದು ರಾಜ್ಯ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ಸಭೆಯಲ್ಲಿ ಭಾಗವಹಿಸಿದ ರಾಜ್ಯದ ವಿವಿಧ ಜಿಲ್ಲೆಗಳಿಂದ ಆಗಮಿಸಿದ್ದ ಸದಸ್ಯರುಗಳು - ತಮ್ಮ ಕಾರ್ಯವ್ಯಾಪ್ತಿಯಲ್ಲಿ ಈ ಸಾಲಿನಲ್ಲಿ ಜರುಗಿದ ಹಲವಾರು ತರಬೇತಿ ಶಿಬಿರಗಳ ಹಾಗೂ ಕಾರ್ಯ ಚಟುವಟಿಕೆ ಬಗ್ಗೆ ವಿವರಣೆಗಳನ್ನು ನೀಡಿದ್ದಲ್ಲದೆ, ತಮ್ಮ ಜಿಲ್ಲೆಯಲ್ಲಿ ಈ ಸಾಲಿನ ಗುರಿ ತಲುಪುವ ಭರವಸೆ ಹೊಂದಿದ್ದಾರೆ. ರಾಜ್ಯದ ಎಲ್ಲಾ ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಗಳು ಹಾಗೂ ಶಾಲೆಯ ಹಾಗೂ ಸ್ವತಂತ್ರ ಘಟಕಗಳು (ದಳಗಳು) ಹಲವಾರು ಸ್ಕೌಟ್-ಗೈಡ್ ಚಟುವಟಿಕೆಗಳನ್ನು ಹಾಗೂ ಶ್ರಮದಾನ ಶಿಬಿರಗಳನ್ನು ನಡೆಸಿದ ಬಗ್ಗೆಯೂ ವರದಿಗಳು ಬಂದಿವೆ.

ಎಲ್ಲಾ ಜಿಲ್ಲೆ ಸಂಸ್ಥೆಗಳು ತಮ್ಮ ಜಿಲ್ಲೆಯಲ್ಲಿನ ಎಲ್ಲ ಸ್ಥಳೀಯ ಸಂಸ್ಥೆಗಳನ್ನು ಹೆಚ್ಚು ಸಕ್ರಿಯಗೊಳಿಸುವುದು ಅತ್ಯಂತ ಅನಿವಾರ್ಯವಾಗಿದೆ. ಮತ್ತೊಂದು ಮಾತು, ಜಿಲ್ಲೆಯಲ್ಲಿನ ಎಲ್ಲ ವೃಕ್ಷಮಣಿ ದಾರಿಗಳನ್ನು ಹೆಚ್ಚಿನ

ತರಬೇತಿಗಳಾದ ಸಹಾಯಕ ನಾಯಕ ತರಬೇತುದಾರ ಮತ್ತು ನಾಯಕ ತರಬೇತುದಾರ, ತರಬೇತಿ ಹೊಂದುವ ಪ್ರಯತ್ನಗಳು ಅವಿರತವಾಗಿ ನಡೆಯಬೇಕಾಗಿದೆ. ಹೆಚ್ಚಿನ ತರಬೇತುದಾರರನ್ನು ಹೊಂದಿದಲ್ಲಿ ಜಿಲ್ಲೆಗಳ ಎಲ್ಲ ಕಾರ್ಯ ಚಟುವಟಿಕೆಗಳನ್ನು ಯಶಸ್ವಿಯಾಗಿ ನಡೆಸಲು ಸಂಪೂರ್ಣ ಸಹಕಾರಿಯಾಗುವುದು.

ಸ್ಕೌಟ್-ಗೈಡ್ ಚಳುವಳಿಯು ಇಂದು ಸಾಕಷ್ಟು ಬೆಳೆದಿದ್ದರೂ, ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಬೆಳೆಯಬೇಕಾದ ಅವಶ್ಯಕತೆ ಇದೆ. ಇದು ಫಲಪ್ರದವಾಗಬೇಕಾದರೆ, ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯ್ತಿಗಳು ಇನ್ನೂ ಹೆಚ್ಚಿನ ನೆರವು, ಸಹಾಯವನ್ನು ನೀಡುವ ಅಗತ್ಯವಿದೆ. ಆದುದರಿಂದ ನಾನು ಸಂಸ್ಥೆಯ ವಿವಿಧ ಹಂತದ ಪದಾಧಿಕಾರಿಗಳಿಗೆ ಮಾಡುವ ಮನವಿಯೆಂದರೆ, ತಾವುಗಳು ತಮ್ಮ ಕಾರ್ಯವ್ಯಾಪ್ತಿಯ ವಿವಿಧ ಹಂತದ ಪಂಚಾಯ್ತಿಗಳಿಗೆ ಸೂಕ್ತ ಮನವಿ ಸಲ್ಲಿಸಿ, ಸ್ಕೌಟ್-ಗೈಡ್ ಚಳುವಳಿಯ ಬೆಳವಣಿಗೆಗೆ ಸಹಾಯ ನೀಡಲು ಕೋರಬೇಕೆಂದು ಪ್ರಾರ್ಥಿಸುತ್ತೇನೆ.

ರಾಜ್ಯದ ಇಬ್ಬರು ಹಿರಿಯ ತರಬೇತುದಾರರಾದ ಶ್ರೀ ಎಸ್.ಪಿ. ಪೂಣಚ್ಚ ಹಾಗೂ ಶ್ರೀ ಬಿ. ಮಂಜುನಾಥ್ ಅವರುಗಳು ಇತ್ತೀಚೆಗೆ ನಿಧನ ಹೊಂದಿದ್ದಾರೆ. ಸಂಸ್ಥೆಯ ಕಾರ್ಯ ಚಟುವಟಿಕೆಗಳಲ್ಲಿ - ವಿವಿಧ ಹಂತಗಳಲ್ಲಿ ಸುದೀರ್ಘ ಹಾಗೂ ನಿಷ್ಠಾಪೂರ್ಣ ಸೇವೆ ಸಲ್ಲಿಸಿ ಅಗಲಿದ ನಾಯಕರುಗಳ ಆತ್ಮಕ್ಕೆ ಚಿರಶಾಂತಿ ದೊರಕಲೆಂದು ಹಾಗೂ ಬಂಧುಗಳಿಗೆ ಅಗಿರುವ ಅತೀವ ದುಃಖವನ್ನು ಭರಿಸುವ ಶಕ್ತಿ ಕೊಡುವಂತೆ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ಸಂಸ್ಥೆಯನ್ನು ಬೆಳೆಸೋಣ - ನಾವು ಅದರೊಂದಿಗೆ ಬೆಳೆಯೋಣ - ನಾವು ಮತ್ತು ತಾವುಗಳೆಲ್ಲ ಈ ದಿಕ್ಕಿನಲ್ಲಿ ಸದಾ ಚಿಂತಿಸೋಣ.

ಸ್ಕೌಟ್ - ಗೈಡ್ ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ,

ಕೊ. ಬಿ. ಷಣ್ಮುಖಪ್ಪ

(ಕೊಂಡಜ್ಜಿ ಬಿ. ಷಣ್ಮುಖಪ್ಪ)

☞ *20ನೆಯ ಶತಮಾನದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆ ಬಂದಿರುವುದು ಶಿಕ್ಷಣತಜ್ಞರಿಂದಲ್ಲ; ಸ್ಕೌಟ್ ಚಳವಳಿಯಲ್ಲಿ ಬೆಳೆದ ಸಿಪಾಯಿಗಳಿಂದ.*

**- ಜಾರ್ಜ್ ಬರ್ನಾರ್ಡ್ ಷಾ**

☞ *ನನ್ನ ದೃಷ್ಟಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ಅತ್ಯುತ್ತಮ ಆಸ್ತಿ. ಅವರು ಹೆಚ್ಚು ವಿಕಾಸಗೊಂಡಷ್ಟು ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.*

**- ಜವಾಹರ್‌ಲಾಲ್ ನೆಹರು**



# ಗದಗ್ ನಗರದಲ್ಲಿ ಯಶಸ್ವಿಯಾಗಿ ನಡೆದ 26ನೇ ರಾಜ್ಯಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವ

26ನೇ ರಾಜ್ಯಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವ ಗದಗ್ ನಗರದ ನಗರಸಭಾ ಪದವಿಪೂರ್ವ ಕಾಲೇಜ್ ಆವರಣದಲ್ಲಿ ದಿನಾಂಕ 27ರಿಂದ 31ನೇ ಜನವರಿ 2003ರವರೆಗೆ ನಡೆಯಿತು. ಈ ಉತ್ಸವದಲ್ಲಿ 640 ಕಬ್ಸ್ 330 ಬುಲ್‌ಬುಲ್ಸ್ 120 ಕಬ್ ಮಾಸ್ಟರ್ಸ್ ಮತ್ತು ಪ್ಲಾಕ್ ಲೀಡರ್ಸ್ ಹಾಗೂ ಉತ್ಸವ ಸಿಬ್ಬಂದಿ 60 ಒಟ್ಟು 1150 ಈ ಉತ್ಸವದಲ್ಲಿ ಪಾಲ್ಗೊಂಡಿದ್ದರು. ಈ ಉತ್ಸವದಲ್ಲಿ ಮಹಾರಾಷ್ಟ್ರ ಹಾಗೂ ದಕ್ಷಿಣ ಮಧ್ಯಮ ರೈಲ್ವೆಯಿಂದ ಕಬ್ಸ್ ಬುಲ್‌ಬುಲ್ಸ್ ಹಾಗೂ ನಾಯಕರು ಅತಿಥಿಗಳಾಗಿ ಭಾಗವಹಿಸಿದ್ದರು.

ಶ್ರೀಮತಿ ಸುರಭಿ ಎಎಲ್‌ಟಿ (ಕಬ್) ಸಿಸ್ಟರ್ ಸಿಸಿಲಿಯಾ ಎಂ ಲೋಬೋ ಎಎಲ್‌ಟಿ (ಬುಲ್‌ಬುಲ್) ಇವರುಗಳು ನಾಯಕರಾಗಿದ್ದರು. ರಾಜ್ಯ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿ ರೆಡ್ಡಿಯವರು ಎಲ್ಲಾ ಕಾರ್ಯಕ್ರಮಗಳು ನಡೆಯುವಂತೆ ಸಹಕಾರ ನೀಡಿದರು. ರಾಜ್ಯ ತರಬೇತಿ ಆಯುಕ್ತರುಗಳಾದ ಶ್ರೀ ನಾರಾಯಣ ಶೆಟ್ಟಿ ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್ ಇವರುಗಳು ಉತ್ಸವದ ಸಂಯೋಜಕರುಗಳಾಗಿದ್ದರು.



ರಾಜ್ಯಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವವನ್ನು ಶ್ರೀ ಶ್ರೀ ಜಗದ್ಗುರು ಅನ್ನದಾನೇಶ್ವರ ಮಹಾಸ್ವಾಮಿಗಳು ಉದ್ಘಾಟಿಸುತ್ತಿರುವುದು. ಶಾಸಕರಾದ ಶ್ರೀ ಡಿ.ಆರ್. ಪಾಟೀಲ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ಜಿಲ್ಲಾಧಿಕಾರಿ ಶ್ರೀ ವಿ.ಆರ್. ಪಾಟೀಲ್ ಜಿಲ್ಲಾ ಸ್ಕೌಟ್ ಆಯುಕ್ತ ಡಾ. ಆರ್. ಎನ್. ಗೋಡಬೋಳೆ, ನಗರ ಯೋಜನಾ ಪ್ರಾಧಿಕಾರದ ಅಧ್ಯಕ್ಷರಾದ ಶ್ರೀ ಹೆಚ್. ವಾಯ್. ದೇಸಾಯಿಗೌಡ್ರ ಅವರುಗಳನ್ನು ಚಿತ್ರದಲ್ಲಿ ಕಾಣಬಹುದು.

## ಮಕ್ಕಳಲ್ಲಿ ಚಾರಿತ್ರ್ಯ ವ್ಯಕ್ತಿತ್ವ ನಿರ್ಮಾಣಕ್ಕೆ ಸಂಘಟನೆಗಳು ಅತ್ಯವಶ್ಯಕ - ಡಿ.ಆರ್. ಪಾಟೀಲ

ಬದಲಾಗಬೇಕಾದ ಸಾಮಾಜಿಕ ವ್ಯವಸ್ಥೆಯಲ್ಲಿ ಮಕ್ಕಳಲ್ಲಿ ಚಾರಿತ್ರ್ಯ ವ್ಯಕ್ತಿತ್ವ ನಿರ್ಮಾಣಕ್ಕೆ ಸ್ಕೌಟ್ಸ್ ಮತ್ತು ಗೈಡ್ಸ್‌ನಂತಹ ಸಂಘಟನೆಗಳು ಅತ್ಯವಶ್ಯಕ ಎಂದು ಶಾಸಕರಾದ ಡಿ.ಆರ್. ಪಾಟೀಲ ಹೇಳಿದರು.

ಅವರು ನಗರದ ಮುನಿಸಿಪಲ್ ಹೈಸ್ಕೂಲ್ ಮೈದಾನದಲ್ಲಿ 26ನೆಯ ಕರ್ನಾಟಕ ರಾಜ್ಯ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವವನ್ನು ಉದ್ಘಾಟಿಸಿ ಮಾತನಾಡುತ್ತ, ಇಂದು ದೇಶದಲ್ಲಿ ಸಮಾಜದಲ್ಲಿ ಸೌಹಾರ್ದತೆ, ಶಾಂತಿ, ಸಂಘಟನೆಗಳು

ಅತ್ಯವಶ್ಯಕವಾಗಿದ್ದು, ಬಲಿಷ್ಠ ರಾಷ್ಟ್ರ ನಿರ್ಮಾಣಕ್ಕಾಗಿ ಪಾಲಕರು ತಮ್ಮ ಮಕ್ಕಳನ್ನು ಇಂತಹ ಸಂಸ್ಥೆಗಳಲ್ಲಿ ಹೆಚ್ಚಾಗಿ ತೊಡಗಿಸಬೇಕೆಂದು ಸಲಹೆ ಮಾಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಸ್ಕೌಟ್ಸ್ ಗೈಡ್ಸ್ ರಾಜ್ಯ ಮುಖ್ಯ ಆಯುಕ್ತರಾದ ಕೊಂಡಜ್ಜಿ ಷಣ್ಮುಖಪ್ಪ ಅವರು ಮಾತನಾಡಿ, ಈ ಸಂಘಟನೆಯ ಚಟುವಟಿಕೆಗಳು ಒಂದು ಅಂತರ್ ರಾಷ್ಟ್ರೀಯ ಚಳುವಳಿಯಾಗಿದ್ದು, ಬಾಲಕರನ್ನು ಉತ್ತಮ ನಾಗರಿಕರನ್ನಾಗಿ ಸಮಾಜಕ್ಕೆ ನೀಡುವ ಇಂತಹ ಚಟುವಟಿಕೆಗಳಲ್ಲಿ ನಾಗರಿಕರ ಸಾಮಾಜಿಕ ಜವಾಬ್ದಾರಿ ಪ್ರಾಮುಖ್ಯವಾಗಿದೆ ಎಂದು ತಿಳಿಸಿದರು.

ಸಮಾರಂಭದ ಸಾನ್ನಿಧ್ಯವನ್ನು ವಹಿಸಿದ್ದ ಮುಂಡರಗಿಯ ಜಗದ್ಗುರು ಅನ್ನದಾನೀಶ್ವರ ಶ್ರೀಗಳು ಕೊನೆಗೆ ಆಶೀರ್ವಚನ ನೀಡಿ ರಾಷ್ಟ್ರದ ಮಕ್ಕಳನ್ನು ಸುಸಂಸ್ಕೃತ ನಾಗರಿಕರನ್ನಾಗಿ ಮಾಡಲು ಇಂತಹ ಸಂಸ್ಥೆಗಳು ಪೂರಕವಾಗಿದ್ದು, ಇದಕ್ಕೆ ಸರ್ಕಾರದ ಜೊತೆಗೆ ಸಂಘ, ಸಂಸ್ಥೆಗಳು ನೆರವುಗಳನ್ನು ನೀಡಬೇಕೆಂದು ಸಲಹೆ ಮಾಡಿದರು.

ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಎಚ್.ವಾಯ್. ದೇಸಾಯಿಗೌಡರ, ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ವ್ಹಿ.ಕೆ. ಕೌತಾಳ ಸಾಂದರ್ಭಿಕವಾಗಿ ಮಾತನಾಡಿದರು.

ಕು. ಚೈತ್ರಾ ಮುರ್ಖಂಡಿ, ಶಿವಪೂರ ಸಹೋದರಿಯರ ಪ್ರಾರ್ಥನಾ ಸ್ವಾಗತ ಗೀತೆಯೊಂದಿಗೆ ಆರಂಭವಾದ ಕಾರ್ಯಕ್ರಮದಲ್ಲಿ ಜಿ. ಪಂ. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀಕಾಂತ ವಾಲಗದ ಸರ್ವರನ್ನು ಸ್ವಾಗತಿಸಿದರು. ಡಾ|| ಆರ್.ಎನ್. ಗೋಡಬೋಲೆ ಹಾಗೂ ಶ್ರೀಮತಿ ಉಮಾ ಶಿವಪೂರ ಕಾರ್ಯಕ್ರಮ ನಿರೂಪಿಸಿದರು. ಕೊನೆಗೆ ಕ್ಷೇತ್ರ ಶಿಕ್ಷಣಾಧಿಕಾರಿ ಡಿ.ವ್ಹಿ. ಬೆಲ್ಲದ ವಂದನಾರ್ಪಣೆ ಗೈದರು.

ವೇದಿಕೆಯ ಮೇಲೆ ಜಿಲ್ಲಾಧಿಕಾರಿ ವ್ಹಿ.ಆರ್. ಪಟೇಲ, ಡಿ.ಡಿ.ಪಿ.ಐ. ಮುಂತಾದವರು ಉಪಸ್ಥಿತರಿದ್ದರು.

## ವಸ್ತು ಪ್ರದರ್ಶನ ಉದ್ಘಾಟನೆ



ಮಾನ್ಯ ಶ್ರೀ ಹೆಚ್. ಕೆ. ಪಾಟೀಲ್, ಜಲ ಸಂಪನ್ಮೂಲ ಸಚಿವರು, ಕರ್ನಾಟಕ ಸರ್ಕಾರ ಇವರು ವಸ್ತು ಪ್ರದರ್ಶನವನ್ನು ಉದ್ಘಾಟಿಸಿ ವೀಕ್ಷಿಸುತ್ತಿರುವುದು.

## ವಿಶ್ವಮಾನವನನ್ನು ನಿರ್ಮಿಸಲು ಸ್ಕೌಟ್ ಗೈಡ್ಸ್ ಸಂಸ್ಥೆಗಳಿದಂ ಸಾಧ್ಯ - ಎಚ್.ಕೆ. ಪಾಟೀಲ

ಸ್ಕೌಟ್ಸ್ ಗೈಡ್ಸ್ ಸಂಸ್ಥೆಯು ಬೆಳೆಯುವ ಮಕ್ಕಳಲ್ಲಿ ಅಗಾಧ ಪರಿಣಾಮವನ್ನು ಬೀರುವಂತಹ ಸಂಸ್ಥೆಯಾಗಿದ್ದು, ಇಂತಹ ಸಂಸ್ಥೆಗಳಿಂದ ವಿಶ್ವಮಾನವನನ್ನು ನಿರ್ಮಿಸಲು ಸಾಧ್ಯ ಎಂದು ಸಚಿವರಾದ ಎಚ್.ಕೆ. ಪಾಟೀಲ ಹೇಳಿದರು.

ಅವರು ರಾಜ್ಯ 26ನೆಯ ಕರ್ನಾಟಕ ರಾಜ್ಯ ಕಬ್ಸ್ ಬುಲ್‌ಬುಲ್ಸ್ ಉತ್ಸವದ ವಸ್ತು ಪ್ರದರ್ಶನವನ್ನು ಉದ್ಘಾಟಿಸಿ ಮಾತನಾಡುತ್ತ, ಶಿಸ್ತು, ಸೇವೆ, ಸಾಮಾಜಿಕ ಹೊಣೆಗಾರಿಕೆ ಬಗ್ಗೆ ಮಕ್ಕಳಿಗೆ ತರಬೇತಿ ನೀಡುವ ಈ ಸಂಘಟನೆಯಲ್ಲಿ ಮಕ್ಕಳು ತಮ್ಮನ್ನು ತಾವು ಪರಿಪೂರ್ಣವಾಗಿ ತೊಡಗಿಸಿಕೊಳ್ಳುವುದರಿಂದ ಜೀವನದಲ್ಲಿ ಏನನ್ನಾದರೂ ಛಲದಿಂದ ಸಾಧಿಸಲು ಸಾಧ್ಯ ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಹೋಟೆಲ್ ಒಡೆಯರ ಸಂಘದ ಅಧ್ಯಕ್ಷರಾದ ಪಿ.ಸಿ. ಕಾಮತ್ ಈ ಸಂಘಟನೆಯ ಕಾರ್ಯ ಚಟುವಟಿಕೆಗಳಿಗೆ ತಾವು ಸದಾ ಸಹಾಯ, ಸಹಕಾರ ನೀಡುವುದಾಗಿ ಹೇಳಿ ಸಮಾರಂಭಕ್ಕೆ ಶುಭ ಕೋರಿದರು.



ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳ ಪಥಸಂಚಲನವನ್ನು ಶ್ರೀ ಸಂಜಯ್ ವೀರ್‌ಸಿಂಗ್, ಜಿಲ್ಲಾ ಪೋಲೀಸ್ ಅಧೀಕ್ಷಕರು ಉದ್ಘಾಟಿಸುತ್ತಿರುವುದು.

ಕಾರ್ಯಕ್ರಮವನ್ನು ಗದಗ ಜಿಲ್ಲೆಯಲ್ಲಿ ಸಂಘಟಿಸಿದ್ದಕ್ಕಾಗಿ ಸಂತಸ ವ್ಯಕ್ತಪಡಿಸಿದರು.

ಇದು ಒಂದು ಅಂತರ್‌ರಾಷ್ಟ್ರೀಯ ಸಂಘಟನೆಯಾಗಿರುವುದರಿಂದ ದೇಶ ದೇಶಗಳ ನಡುವೆ ಭ್ರಾತೃತ್ವವನ್ನು ಬೆಳೆಸಲು ಸುಸಂಸ್ಕೃತ ವಿದ್ಯಾರ್ಥಿಗಳ ನಿರ್ಮಾಣಕ್ಕೆ ಪೂರಕವಾಗಿದೆ ಎಂದ ಅವರು, 38 ವರ್ಷಗಳ ಹಿಂದೆ ತಾವು ಪ್ರಾಥಮಿಕ ಶಿಕ್ಷಣ ಪಡೆಯುವಾಗ ಸ್ಕೌಟ್‌ನ ಸದಸ್ಯರಾಗಿ ದೊಡ್ಡಬಳ್ಳಾಪುರದಲ್ಲಿ ನಡೆದ ಸಮಾವೇಶದಲ್ಲಿ ಪಾಲ್ಗೊಂಡಿದ್ದನ್ನು ಈ ಸಂದರ್ಭದಲ್ಲಿ ಸ್ಮರಿಸಿದರು.

ಅತಿಥಿಗಳಾಗಿ ಆಗಮಿಸಿದ್ದ ಶಿರಹಟ್ಟಿ ಪಟ್ಟಣ ಪಂಚಾಯತಿ ಅಧ್ಯಕ್ಷರಾದ ಹುಮಾಯೂನ್ ಮಾಗಡಿ ಅವರು ಮಾತನಾಡಿ, ದೇಶಾಭಿಮಾನವನ್ನು ಹುಟ್ಟಿಸುವ

ವೇದಿಕೆಯ ಮೇಲೆ ಪ್ರಾ. ಪಾಟೀಲ, ಶ್ರೀಮತಿ ಕುಸುಮಾದೇವಿ ಮಾಳಿಕೊಪ್ಪ ಮಠ, ಶ್ರೀಮತಿ ಉಮಾ ಶಿವಪೂರ, ಎಸ್.ಪಿ. ಸಂಜಯ ವೀರಸಿಂಗ್, ಎ. ಅನಂತ್ ಭಟ್ ಮುಂತಾದವರು ಉಪಸ್ಥಿತರಿದ್ದರು.

ಈ ಉತ್ಸವದ ಅಂಗವಾಗಿ 28.1.03ರಂದು ನಗರದ ಪ್ರಮುಖ ರಸ್ತೆಗಳಲ್ಲಿ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಂದ ನಡೆದ ಅತ್ಯಾಕರ್ಷಕವಾದ ಪಥಸಂಚಲನವನ್ನು ಎಸ್.ಪಿ. ಸಂಜಯವೀರಸಿಂಗ್ ಉದ್ಘಾಟಿಸಿದರು. ಪಥಸಂಚಲನೆ ಸಂದರ್ಭದಲ್ಲಿ ನಗರದ ನಾಗರೀಕರು, ವ್ಯಾಪಾರಸ್ತರು ಮಕ್ಕಳಿಗೆ ಸಿಹಿ ಮತ್ತು ಪಾನೀಯವನ್ನು ನೀಡಿ ಸತ್ಕರಿಸಿದರು.

**ಕಬ್ ಮಾಸ್ಟರ್ ಮತ್ತು ಪ್ಲಾಕ್ ಲೀಡರ್ಸ್‌ಗಳಿಂದ ಶಿಬಿರಾಗ್ನಿ ಕಾರ್ಯಕ್ರಮ**

28.01.03ರಂದು ರಾತ್ರಿ ಪರಮಪೂಜ್ಯ ಶ್ರೀ ಜ. ತೊಂಟದ ಡಾ। ಸಿದ್ಧಲಿಂಗ ಮಹಾಸ್ವಾಮಿಗಳ ಸಾನ್ನಿಧ್ಯದಲ್ಲಿ ಕಬ್ ಮಾಸ್ಟರ್ಸ್ ಹಾಗೂ ಪ್ಲಾಕ್ ಲೀಡರ್ಸ್‌ಗಳಿಂದ ಶಿಬಿರಾಗ್ನಿ ಕಾರ್ಯಕ್ರಮ ನಡೆಯಿತು. ಜಿಲ್ಲಾ ನ್ಯಾಯಾಧೀಶರಾದ ಶ್ರೀ ಬಿ.ಆರ್. ಬೂದಿಹಾಳ್‌ರವರು ಶಿಬಿರಾಗ್ನಿಯನ್ನು ಉದ್ಘಾಟಿಸಿದರು.

**ಕಬ್ಸ್ ಮತ್ತು ಬುಲ್‌ಬುಲ್ಸ್ ಮಕ್ಕಳಿಂದ ಪ್ರವಾಸ**

ಉತ್ಸವದಲ್ಲಿ ಭಾಗವಹಿಸಿದ ಎಲ್ಲಾ ಮಕ್ಕಳನ್ನು ದಿನಾಂಕ 29.02.03ರಂದು ಲಕ್ಕುಂಡಿ ದೇವಸ್ಥಾನ ಹಾಗೂ ಗದುಗಿನ ವೀರನಾರಾಯಣಸ್ವಾಮಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿದ್ದು ಮಕ್ಕಳು ಸಂತಸಗೊಂಡರು.

**ಜಾನಪದ ಮೇಳ**

29.01.03ರಂದು ಮುಂಡರಗಿ ತಾ। ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಜಗದೀಶ್ ಆಳವಂಡಿಯವರು ಮಧ್ಯಾಹ್ನ 3 ಘಂಟೆಗೆ ಜಾನಪದ ಮೇಳವನ್ನು ಉದ್ಘಾಟಿಸಿದರು. ವಿವಿಧ ವೇಷಭೂಷಣಗಳಿಂದ ಅಲಂಕೃತಗೊಂಡು ನೀಡಿದ ಜನಪದ ನೃತ್ಯಗಳು, ವೀರಪುರುಷರ ಸಾಹಸಮಯ ಜೀವನ, ಸುಗ್ಗಿ ಕುಣಿತ, ಕೋಲಾಟ, ಜಿಲ್ಲೆಗಳ ಐತಿಹಾಸಿಕ ಜೀವನವನ್ನು ಪ್ರತಿಬಿಂಬಿಸುವ ದೃಶ್ಯಾವಳಿಗಳು ಎಲ್ಲರ ಮೆಚ್ಚುಗೆಗೆ ಪಾತ್ರವಾದವು. ಈ ಸಂದರ್ಭದಲ್ಲಿ ರಾಜ್ಯ ಹಾಗೂ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು.

**ಭವ್ಯ ಶಿಬಿರಾಗ್ನಿ ಕಾರ್ಯಕ್ರಮ**

ದಿನಾಂಕ 29.01.03ರಂದು ರಾತ್ರಿ 8.30ಕ್ಕೆ ಶ್ರೀ ಎಲ್.ಡಿ. ಚಂದಾವರಿ ಅಧ್ಯಕ್ಷರು, ಗದಗ ಬೆಟಗೇರಿ ನಗರಸಭೆ ಇವರು ಭವ್ಯ ಶಿಬಿರಾಗ್ನಿಯನ್ನು ಉದ್ಘಾಟಿಸಿದರು. ಪುಟಾಣಿಗಳು, ನೃತ್ಯ, ಹಾಡು, ಜಾನಪದ ಗೀತೆ, ನಟನೆ ಇತ್ಯಾದಿ ಕಾರ್ಯಕ್ರಮಗಳನ್ನೂ ನೀಡಿದರು. ಸನ್ಮಾನ್ಯ ಅಧ್ಯಕ್ಷರು ಮಾತನಾಡಿ ಮಕ್ಕಳಲ್ಲಿ ಹುದುಗಿರುವ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸಬೇಕೆಂದು ಮಡಿದರು. ಈ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು, ರಾಜ್ಯ ಆಯುಕ್ತೆ (ಗೈಡ್ಸ್) ಶ್ರೀಮತಿ ಎಂ.ಜಿ. ಬೋಪಯ್ಯ, ರಾಜ್ಯ (ಸ್ಕೌಟ್ಸ್) ಆಯುಕ್ತರಾದ ಶ್ರೀ ಮಹಮದ್ ಜಹಿರುದ್ದೀನ್, ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್) ಶ್ರೀಮತಿ ಶಾಂತಿಮತಿ, ಉಪಸ್ಥಿತರಿದ್ದರು.

**ಸರ್ವಧರ್ಮ ಪ್ರಾರ್ಥನೆ**

30.01.03ರಂದು ಬೆಳಗ್ಗೆ 7.30ಕ್ಕೆ ಸರ್ವಧರ್ಮ ಪ್ರಾರ್ಥನೆ ಪೂಜ್ಯಶ್ರೀ ಪ್ರಕಾಶ್ ನಂದಜಿ ಸ್ವಾಮೀಜಿ, ರಾಮಕೃಷ್ಣಾಶ್ರಮ, ಪೂಜ್ಯಶ್ರೀ ಡಿನಿಸ್ ರೋಡ್ರಿಗ್ಸ್, ಧರ್ಮಗುರುಗಳು, ಗದಗ್ ಇವರ ಸಾನಿಧ್ಯದಲ್ಲಿ ನಡೆಯಿತು.

**ಗದಗ್ ಜಿಲ್ಲಾ ಸ್ಕೌಟರ್ಸ್ ಗೈಡರ್ಸ್‌ಗಳ ಸಮಾವೇಶ**

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರ ಅಧ್ಯಕ್ಷತೆಯಲ್ಲಿ ಸ್ಕೌಟರ್ಸ್ ಗೈಡರ್ಸ್‌ಗಳ ಸಮಾವೇಶ ನಡೆಯಿತು. ಸ್ಕೌಟ್ಸ್, ಗೈಡ್ಸ್ ದಳಗಳ ಬಗ್ಗೆ, ಸ್ಥಳೀಯ ಸಂಸ್ಥೆ ಚಟುವಟಿಕೆಗಳ ಬಗ್ಗೆ, ಮಕ್ಕಳ ಹಾಗೂ ಸ್ಕೌಟರ್ಸ್, ಗೈಡರ್ಸ್‌ಗಳ ಗುಣಮಟ್ಟ ಹಾಗೂ ಚಳುವಳಿಯ ಅಭಿವೃದ್ಧಿ ಬಗ್ಗೆ ಚರ್ಚಿಸಲಾಯಿತು. ಜಿಲ್ಲಾ ಉಪನಿರ್ದೇಶಕರಾದ ಶ್ರೀ ಮುಕ್ತಿನಾಥರವರು, ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.





ಉತ್ಸವದಲ್ಲಿ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳು ವಿವಿಧ ಚಟುವಟಿಕೆಗಳಲ್ಲಿ ತೊಡಗಿರುವರು.

## ಯಶಸ್ವಿಯೊಂದಿಗೆ ರಾಜ್ಯ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವ ಮುಕ್ತಾಯ



ಉತ್ಸವದಲ್ಲಿ ಮುಕ್ತಾಯ ಸಮಾರಂಭದಲ್ಲಿ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿ ಶ್ರೀ ಶ್ರೀಕಾಂತ್ ವಾಲಗದ ಅವರು "ಚಿಗುರು ಚೇತನ" ಸ್ವರ್ಣ ಸಂಚಿಕೆಯನ್ನು ಬಿಡುಗಡೆ ಮಾಡುತ್ತಿರುವುದು.

ನಗರದ ಮುನಸಿಪಲ್ ಹೈಸ್ಕೂಲ್ ಮೈದಾನದಲ್ಲಿ 4 ದಿನಗಳವರೆಗೆ ಜರುಗಿದ 26ನೆಯ ಕರ್ನಾಟಕ ರಾಜ್ಯ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವವು ಯಶಸ್ವಿಯೊಂದಿಗೆ 30.1.03ರಂದು ಸಾಯಂಕಾಲ ಮುಕ್ತಾಯಗೊಂಡಿತು.

ಇದರ ಅಂಗವಾಗಿ ಈ ಸಂದರ್ಭದಲ್ಲಿ ಚಿಗುರು ಚೇತನ ಸವಿಸಂಚಿಕೆಯನ್ನು ಬಿಡುಗಡೆ ಮಾಡಿ, ಮಾತನಾಡಿದ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಶ್ರೀಕಾಂತ ವಾಲಗದ ಅವರು, ಈ ಉತ್ಸವ ಕಾರ್ಯಕ್ರಮದಲ್ಲಿ ಭಾಗವಹಿಸಿ ತರಬೇತಿ ಪಡೆದು ಕೊಂಡ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳು ಭವಿಷ್ಯದಲ್ಲಿ ಒಳ್ಳೆಯ ನಾಯಕತ್ವವನ್ನು ಬೆಳೆಸಿಕೊಂಡು ಉನ್ನತ ಸಾಧನೆಗಳನ್ನು ಮಾಡಲಿ ಎಂದು ಹಾರೈಸಿದರು.

ಗದಗ ಜಿಲ್ಲೆಯಲ್ಲಿ ನಾಲ್ಕು ದಿನಗಳ ಕಾಲ ನಡೆದ ಈ ಉತ್ಸವಕ್ಕಾಗಿ ಆಡಳಿತ ವರ್ಗವು ಒಳ್ಳೆಯ ವ್ಯವಸ್ಥೆಗೆ ಪ್ರಾಮಾಣಿಕ ಪ್ರಯತ್ನ ಮಾಡಿದ್ದು, ಯಶಸ್ಸಿಗೋಸ್ಕರ ಸಂತಸವನ್ನು ವ್ಯಕ್ತಪಡಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ರಾಜ್ಯ ಮುಖ್ಯ ಆಯುಕ್ತರಾದ ಕೊಂಡಜ್ಜಿ ಬಿ. ಷಣ್ಮುಖಪ್ಪ ಅವರು ಗದಗ ಜಿಲ್ಲೆಯಲ್ಲಿ ಸುವ್ಯವಸ್ಥಿತ ಕಾರ್ಯಕ್ರಮಕ್ಕೆ ಸಹಕರಿಸಿದ ಆಡಳಿತ ವರ್ಗಕ್ಕೂ ಸರ್ವ ಸಂಘ, ಸಂಸ್ಥೆ, ಸಂಘಟನೆಗಳಿಗೂ ಕೃತಜ್ಞತೆ ಹೇಳಿದರು.

ಡಿ.ಡಿ.ಪಿ.ಐ., ಎಸ್.ಎಂ. ಮುಕ್ತಿನಾಥ ಸಮಾರಂಭದಲ್ಲಿ ಸರ್ವರನ್ನು ಸ್ವಾಗತಿಸಿದರು. ಸಿಸಿಲಿಯಾ ಲೋಬೊ ವರದಿ ನೀಡಿದರು. ಬಿ.ಇ.ಓ. ಡಿ.ವ್ಹಿ. ಬೆಲ್ಲದ ಕೊನೆಗೆ ವಂದನಾರ್ಪಣೆಗೈದರು.

ವೇದಿಕೆಯ ಮೇಲೆ ಸಿ. ಎನ್. ಪಾಟೀಲ ಶಿಕ್ಷಣಾಧಿಕಾರಿ ಎಸ್. ಎನ್. ಖಾಜಿ, ಶ್ರೀಮತಿ ಕಸ್ತೂರಿ ಹಿರೇಗೌಡರ, ಡಾ|| ಆರ್. ಎನ್. ಗೋಡಬೋಲೆ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ಗಾರ್ಗಿ ಈ.ಜಿ. ಚೋಳಿನ ಉಪಸ್ಥಿತರಿದ್ದರು.




# 85 Unit Leaders attented the State Level Training Courses held at Kondajji

K S & G NEWS SERVICE

***Kondajji January 24***

*The Bharat Scouts and Guides, Karnataka Guide Wing organised three Training Courses for Unit leaders from 17th to 23rd January 2003 at Kondajji Basappa Scouts and Guides Training Centre, Kondajji.*

### *Basic Course for Flock Leaders*

*Mrs. Lilly D' Cunha ALT(B) was the Leader. 40 members participated in the Training Course drawn from Bangalore Division.*

### *Advanced Course for Flock Leaders*

*Sr. Cecelia M. Lobo ALT(B) was the Leader. 20 Unit Leaders participated in the Training Course.*

### *Himalaya Wood Badge Part II Course*

*Smt. Nirmala Kalashetty LT(B) was the Leader, 25 Unit Leaders participated in the Training Course. Mrs. M.G. Bopaiah, State Commissioner (Guide) Smt. M. Shanthimathi, Joint State Secretary (Guide) visited the camp and addressed the campers. Sri Narayana Setty, State Training Commissioner, Sri N. Srinivasan LT(S) visited the camp. Sri S. Jambagi Sharanappa, District Chief Commissioner and Smt. Vanajakshamma, District Commissioner (Guide), Davangere participated in the Validectory Function. Smt. Janaki Venugopal, State Training Commissioner (Guide) Co-ordinated the Training Programme.*



*The last JAMBOREE which **B-P** attended was in **Holland in1937**.*
*In his closing talk to the Scouts he said :*

*"This great Jamboree will have a vital and very far-reaching effect throughout the world in the cause of **peace**, and so pledge all of you here in this great assembly of youth to do your utmost to establish **friendship** among Scouts of all nations"*

## ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮ



ದಿನಾಂಕ 9.2.2003ರಂದು ಗದಗ ಜಿಲ್ಲೆ ಶಿರಹಟ್ಟಿ ತಾಲ್ಲೂಕಿನ ಬಟ್ಟೂರ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯ ಶ್ರೀಮಾತೆ ಶಾರದಾದೇವಿ ದಳದ ಸ್ಕೌಟ್ಸ್-ಗೈಡ್ಸ್ ಮಕ್ಕಳು ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮದಲ್ಲಿ ಸ್ವಯಂ ಸೇವಕರಾಗಿ ಭಾಗವಹಿಸಿದರು.




## on Scouting for Boys

**Mohammed Wasil**
*Head Quarters Commissioner (Programme)*

1. *Who was Mr. Lurgan?*
2. *What Lessons did Kim get from Mr. Lurgan?*
3. *Who was the beggar?*
4. *Where is Mafeking?*
5. *Who were Mafeking Cadet Corps?*
6. *What do you mean by 'Living in open'?*
7. *What is hiking?*
8. *What hve the scouts to do while camping?*
9. *What is woodcraft?*
10. *Why Baden Powell calls Knights as real scouts?*

*Please refer Page No. 23 for Answers*

**ಜಿಲ್ಲಾ ವಾರ್ತೆಗಳು**

## ಬೆಂಗಳೂರು ಗ್ರಾಮಾಂತರ ಜಿಲ್ಲೆ

# ವೈಭವಯುತ ಜಿಲ್ಲಾಮೇಳ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಬೆಂಗಳೂರು (ಗ್ರಾ) ಜಿಲ್ಲೆಯ ಆಶ್ರಯದಲ್ಲಿ ದಿ. 17ರಿಂದ 19.1.03 ರವರೆಗೆ ಮಾಗಡಿ ತಾ। ಕುದೂರು, ಇಲ್ಲಿ ನಡೆದ 'ಜಿಲ್ಲಾ ಕ್ಯಾಂಪೋರಿ' (ಸ್ಕೌಟ್ಸ್ ಮತ್ತು ಗೈಡ್ಸ್ ಮೇಳ ಮತ್ತು ಕಬ್ ಮತ್ತು ಬುಲ್‌ಬುಲ್ ಉತ್ಸವ)ಯಲ್ಲಿ ಸುಮಾರು 5000 ಸ್ಕೌಟ್ ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರದ ಯಶಸ್ಸಿಗೆ ಎಲ್ಲಾ ರೀತಿಯ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ನೀಡುವ ಮೂಲಕ ಸನ್ಮಾನ್ಯ ಶ್ರೀ ಹೆಚ್.ಎಂ. ರೇವಣ್ಣನವರು ಮೇಳವನ್ನು ಅದ್ದೂರಿಯಾಗಿ ನಡೆಸಿದರು.



ಸನ್ಮಾನ್ಯರು ಪ್ರತಿಹಂತದಲ್ಲೂ ಸ್ಕೌಟ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ನೋಡಿ, ಆನಂದಿಸಿ ತುಂಬು ಮನಸ್ಸಿನಿಂದ ಮಕ್ಕಳಿಗೆ ಹಾಗೂ ಶಿಕ್ಷಕರಿಗೆ ಅಭಿನಂದಿಸಿ, ಹಾರೈಸಿ, ಆಶೀರ್ವದಿಸರಲ್ಲದೇ ಇಂದಿನ ಸಮಾಜಕ್ಕೆ ಶಿಸ್ತು ಸಹಬಾಳ್ವೆ, ರಾಷ್ಟ್ರೀಯ ಭಾವೈಕ್ಯತೆ, ವಿಶ್ವಭ್ರಾತೃತ್ವ, ನಾಯಕತ್ವದ ಮೂಲಕ ದೇಶದ ಸತ್ಪ್ರಜೆಗಳನ್ನು ಸೃಷ್ಟಿಸಬಲ್ಲ ಸಂಸ್ಥೆಗಳಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಒಂದು. ಗ್ರಾಮಾಂತರದ ಮಕ್ಕಳು ಈ ಸಾಲಿನಲ್ಲಿ ಹೆಚ್ಚು ಹೆಚ್ಚು ರಾಜ್ಯಪಾಲರ ಹಾಗೂ ರಾಷ್ಟ್ರಪತಿಗಳಿಂದ ಪದಕ ಪಡೆಯುವುದು, ವಿದೇಶಕ್ಕೆ ಹೋಗಿ ಬಂದಿರುವುದು ಹೆಮ್ಮೆಯ ವಿಷಯವೆಂದು ಹೇಳುವ ಮೂಲಕ ತಮ್ಮ ವಿದ್ಯಾರ್ಥಿ ಜೀವನದ ಸಿಹಿನೆನಪುಗಳನ್ನು ಶಿಬಿರಾರ್ಥಿಗಳೊಂದಿಗೆ ಹಂಚಿಕೊಂಡರು. ಪ್ರತಿ ಶಾಲೆಯವರು ದಳ ತೆರೆದು ಸದುಪಯೋಗ ಪಡಿಸಿಕೊಳ್ಳುವಂತೆ ಕರೆ ಇತ್ತರು.

ದಿ. 17-1-2003ರಂದು ಸನ್ಮಾನ್ಯ ಪ್ರೊ।। ಬಿ.ಕೆ. ಚಂದ್ರಶೇಖರ್, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು ಜಿಲ್ಲಾ ಕ್ಯಾಂಪೋರಿಯನ್ನು ಉದ್ಘಾಟಿಸಿ, ತಮ್ಮ ಉದ್ಘಾಟನಾ ಭಾಷಣದಲ್ಲಿ ರಾಷ್ಟ್ರಾಭಿಮಾನ, ಸೋದರತ್ವ, ಸಹಬಾಳ್ವೆ ಇಂಥ ಉದಾತ್ತ ಭಾವನೆಗಳನ್ನು ಬೆಳೆಸಿಕೊಳ್ಳಬೇಕು ಎಂದು ತಿಳಿಸಿದರು. ಸ್ಕೌಟ್ಸ್ ಮತ್ತು ಗೈಡ್ಸ್ ಸಮವಸ್ತ್ರದ ಕೊರತೆಯನ್ನು ತಿಳಿದ ಸಚಿವರು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಸರ್ಕಾರದ ವತಿಯಿಂದ ನೀಡುವ ಭರವಸೆಯನ್ನು ನೀಡಿದರು.



ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಸನ್ಮಾನ್ಯ ಶ್ರೀ ವಿ. ಕೃಷ್ಣಪ್ಪ, ಶಾಸಕರು ದೊಡ್ಡಬಳ್ಳಾಪುರ ಇವರು ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಚಟುವಟಿಕೆ ನೋಡಿ ಮೆಚ್ಚುಗೆ ವ್ಯಕ್ತಪಡಿಸಿದರು. ಸನ್ಮಾನ್ಯ ಶ್ರೀ ದೊಡ್ಡಸಿದ್ದಪ್ಪ, ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಉಪನಿರ್ದೇಶಕರು, ಸಾ.ಶಿ.ಇ. ಬೆಂಗಳೂರು (ಗ್ರಾ) ಜಿಲ್ಲೆ ಹಾಗೂ ಅನೇಕ ಗಣ್ಯರು ಭಾಗವಹಿಸಿದ್ದರು.



ದಿ. 18.01.03ರಂದು ಬೆಳಗ್ಗೆ 11.00 ಗಂಟೆಗೆ ವಸ್ತುಪ್ರದರ್ಶನದ ಉದ್ಘಾಟನೆ ಸಮಾರಂಭದಲ್ಲಿ

ಶ್ರೀ ದೇಶಯ್ಯ, ಕಾರ್ಯ ನಿರ್ವಹಣಾಧಿಕಾರಿಗಳು, ಮಾಗಡಿ, ಶ್ರೀ ಈಶ್ವರಪ್ಪ, ಅಧ್ಯಕ್ಷರು, ಗ್ರಾ.ಪಂ., ಕುದೂರು ಭಾಗ ವಹಿಸಿದ್ದರು.

ದಿ. 18.01.03ರಂದು ಸಂಜೆ 3.00 ಗಂಟೆಗೆ ತಾಲ್ಲೂಕು ಸಾಂಸ್ಕೃತಿಕ ಮೇಳದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಸನ್ಮಾನ್ಯ ಶ್ರೀ ರಾಮಲಿಂಗರೆಡ್ಡಿ ಆಹಾರ ಮತ್ತು ನಾಗರಿಕ ಪೂರೈಕೆ ಸಚಿವರು ಶಿಬಿರಾರ್ಥಿಗಳನ್ನುದ್ದೇಶಿಸಿ ಮಕ್ಕಳಲ್ಲಿ ಶಿಸ್ತು ಮತ್ತು ಶ್ರದ್ಧೆ ಬಹಳ ಮುಖ್ಯ. ಅದನ್ನು ಬೆಳೆಸಿಕೊಳ್ಳಲು ಇಂತಹ ಕ್ಯಾಂಪೋರಿ, ಮೇಳಗಳಲ್ಲಿ ಭಾಗ ವಹಿಸಿದಾಗ ಕಲಿಯಲು ಸಾಧ್ಯ. ಪೋಷಕರು ಇಂತಹ ಶಿಬಿರಕ್ಕೆ ಹೆಚ್ಚು ಪ್ರೋತ್ಸಾಹ ನೀಡಿ ಹಾರೈಸಬೇಕು ಎಂದು ತಿಳಿಸಿದರು.



ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಸನ್ಮಾನ್ಯ ಶ್ರೀ ಜಿ.ಎಸ್. ನಾರಾಯಣಸ್ವಾಮಿ, ಜಿಲ್ಲಾಧಿಕಾರಿಗಳು ಸಭೆಯನ್ನುದ್ದೇಶಿಸಿ ಮಾತನಾಡುತ್ತಾ ಮಗುವಿನ ಸರ್ವತೋನ್ಮುಖ ಅಭಿವೃದ್ಧಿಗೆ ಇಂತಹ ಕಾರ್ಯ ಚಟುವಟಿಕೆಗಳು ಬಹಳ ಮುಖ್ಯ. ಇಂತಹ ಶಿಬಿರಗಳನ್ನು ವ್ಯವಸ್ಥೆ ಮಾಡಿದ ಪದಾಧಿಕಾರಿಗಳು, ಸಂಸ್ಥೆ ಹಾಗೂ ಪೋಷಕರ ಸಹಯೋಗದೊಡನೆ ಹೆಚ್ಚು ಹೆಚ್ಚು ಚಟುವಟಿಕೆಗಳನ್ನು ಹಮ್ಮಿಕೊಂಡು ಸತ್ಪ್ರಜೆಗಳನ್ನು ಸೃಷ್ಟಿಸಲಿ ಎಂದು ಹಾರೈಸಿದರು.



ಇದೇ ಸಂದರ್ಭದಲ್ಲಿ ದೇವನಹಳ್ಳಿ ಶಾಸಕರಾದ ಸನ್ಮಾನ್ಯ ಶ್ರೀ ಮುನಿನರಸಿಂಹಯ್ಯನವರು ಕನ್ನಡದ ಬಗ್ಗೆ ಕಳವಳವನ್ನು ವ್ಯಕ್ತಪಡಿಸುತ್ತ, ಕನ್ನಡಭಾಷೆಯನ್ನು ಉಳಿಸಿ, ಬೆಳೆಸಬೇಕು. ಹಾಗೆಯೇ ಸ್ಕೌಟ್ ಮತ್ತು ಗೈಡ್ಸ್ ಶಿಕ್ಷಣಕ್ಕೂ ಆದ್ಯತೆ ನೀಡಬೇಕು ಎಂದು ಕರೆ ಇತ್ತರು.



ದಿ. 19.01.2003ರಂದು ಸಮಾರೋಪ ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಸನ್ಮಾನ್ಯ ಶ್ರೀ ಹೆಚ್. ವಿಶ್ವನಾಥ್, ಸಹಕಾರಿ ಸಚಿವರು ಸಭೆಯನ್ನುದ್ದೇಶಿಸಿ ಚೈತನ್ಯ ಚಿಲುಮೆಗಳಾದ ಈ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಲ್ಲಿ ಒಳ್ಳೆಯ ನಡೆ, ನುಡಿ, ವಿನಯವನ್ನು ಬೆಳೆಸಬೇಕು. ಸಮುದಾಯವನ್ನು ನಾವು ಆಕರ್ಷಕ ಚಟುವಟಿಕೆಗಳಿಂದ ಸೆಳೆಯಬೇಕು. ಇಲ್ಲಿ ಸೇರಿರುವ ಸಾವಿರಾರು ಸಾರ್ವಜನಿಕ ಬಂಧುಗಳನ್ನು ಈ ಕ್ಯಾಂಪೋರಿ ಆಕರ್ಷಿಸಿದೆ. ಆ ರೀತಿ ಮುಂದೆಯೂ ಮುಂದುವರಿಯಬೇಕು ಎಂದು ತಿಳಿಸಿದರು.



ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಮಾತನಾಡುತ್ತಾ, ಇಂತಹ ಸ್ಕೌಟ್ಸ್ ಮತ್ತು ಗೈಡ್ಸ್ ಚಟುವಟಿಕೆಗಳಿಗೆ ನಿಮ್ಮಗಳ ಸಹಾಯ, ಸಹಕಾರ ಮುಖ್ಯ. ಇಂದು ಜಿಲ್ಲಾ ಕ್ಯಾಂಪೋರಿ ನಡೆಸಲು ಈ ಕ್ಷೇತ್ರದ ಸಚಿವರು, ಸ್ಥಳೀಯ ನಾಯಕರು ಹಾಗೂ ಗ್ರಾಮಸ್ಥರು ಮತ್ತು ಅಧಿಕಾರಿ ಬಂಧುಗಳು ನೀಡಿರುವ ಸಹಕಾರದಂತೆ ಎಲ್ಲಾ ಕ್ಷೇತ್ರದಲ್ಲೂ ನೀಡಿದ್ದೇ ಆದರೆ ಸ್ಕೌಟ್ಸ್ ಗೈಡ್ಸ್ ಚಟುವಟಿಕೆ ಇನ್ನೂ ಹೆಚ್ಚಿನ ರೀತಿಯಲ್ಲಿ ನಡೆಸಲು ಸಾಧ್ಯ ಎಂದು ತಿಳಿಸಿದರು.



ಮೂರು ದಿನಗಳ ಕಾಲ ಜಿಲ್ಲಾ ಕ್ಯಾಂಪೋರಿಯ ಕಾರ್ಯಚಟುವಟಿಕೆಯಲ್ಲಿ ಭಾಗವಹಿಸಿದ್ದ ಮಾನ್ಯ ಶ್ರೀ ನರಸಿಂಹಮೂರ್ತಿ, ಅಧ್ಯಕ್ಷರು, ಜಿಲ್ಲಾ ಪಂಚಾಯತ್ ಮುಕ್ತಾಯ ಸಮಾರಂಭಕ್ಕೆ ಆಗಮಿಸಿದ್ದ ಮಾನ್ಯ ಶ್ರೀ ಸಿ.ಡಿ. ಸತ್ಯನಾರಾಯಣಗೌಡ, ಶಿಕ್ಷಣ

ಸ್ಥಾಯಿ ಸಮಿತಿ ಅಧ್ಯಕ್ಷರು, ಶ್ರೀಮತಿ ಮೀನಾಕ್ಷಮ್ಮ ಬಾಲರಾಜು, ಸದಸ್ಯರು ಜಿ.ಪಂ., ಶಿವನಂಜಪ್ಪ, ಜಿಲ್ಲಾ ಕಾರ್ಯದರ್ಶಿ, ಭಾ. ಸ್ಕೌಟ್ಸ್ ಮತ್ತು ಗೈಡ್ಸ್, ಗ್ರಾಮ ಪಂಚಾಯತ್ ಸದಸ್ಯರು, ಸಂಘ-ಸಂಸ್ಥೆಯ ಪದಾಧಿಕಾರಿಗಳು, ಶಾಲಾ/ಕಾಲೇಜುಗಳ ಮುಖ್ಯಸ್ಥರು ಮತ್ತು ಸಹಶಿಕ್ಷಕರು ಭಾಗವಹಿಸಿದ್ದರು.

ದಿ. 17.01.03ರಿಂದ 19.01.03ರವರೆಗೆ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ - ಫೈನರಿಂಗ್, ಕುಕಿಂಗ್, ಕೌಶಲ್ಯ ಪ್ರದರ್ಶನ, ಗುಡಾರ ನಿರ್ಮಾಣ, ಧ್ವಜಸ್ಥಂಭ ನಿರ್ಮಾಣ ಇತ್ಯಾದಿ ಕಬ್ಸ್ ಮತ್ತು ಬುಲ್‌ಬುಲ್‌ಗಳಿಗೆ - ಮಿನಿ ಒಲಂಪಿಕ್ಸ್, ಡ್ರಾಯಿಂಗ್, ಪೆಯಿಂಟಿಂಗ್, ಕಾಡುಕುಣಿತ, ಬಿ.ಪಿ. ಸಿಕ್ಸ್ ಇತ್ಯಾದಿ ಚಟುವಟಿಕೆಗಳನ್ನು ಹಮ್ಮಿಕ್ರೊಳ್ಳಲಾಗಿತ್ತು.

ಸನ್ಮಾನ್ಯ ಶ್ರೀ ದೊಡ್ಡಸಿದ್ದಪ್ಪ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಉಪನಿರ್ದೇಶಕರು, ಶ್ರೀ ಸಿ.ವಿ. ವಸಂತಮಾಧವ, ಜಿಲ್ಲಾ ಆಯುಕ್ತರು, ಶ್ರೀಮತಿ ಗೀತಾ, ಇ.ಓ.ರವರು, ವಿಷಯ ಪರಿವೀಕ್ಷಕರು, ಎಲ್ಲಾ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಿಲ್ಲಾ ಪದಾಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಮತ್ತು ಪದಾಧಿಕಾರಿಗಳು ಎಲ್ಲಾ ರೀತಿಯ ಸಹಕಾರ ನೀಡಿ ಕ್ಯಾಂಪೋರಿಯ ಯಶಸ್ಸಿಗೆ ಕಾರಣರಾಗಿದ್ದಾರೆ.

## ಹೊಸಕೋಟೆ ತಾಲ್ಲೂಕು

ಬೆಂಗಳೂರು ಗ್ರಾಮಾಂತರ ಜಿಲ್ಲಾ, ಹೊಸಕೋಟೆ ತಾಲ್ಲೂಕು ಸೂಲಿಬೆಲೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರವನ್ನು ದಿನಾಂಕ 21-1-2003 ಹಾಗೂ 22-1-2003 ಈ ದಿನಗಳಲ್ಲಿ ವಿವೇಕಾನಂದ ಪ್ರೌಢಶಾಲಾ ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದ ಉದ್ಘಾಟನೆಯನ್ನು ಸು.ರಂ. ರಾಮಯ್ಯನವರು, ಮಾಜಿ ಶಾಸಕರು ನೆರವೇರಿಸಿಕೊಟ್ಟು ದೇಶಾಭಿಮಾನವನ್ನು ಬೆಳೆಸಿಕೊಳ್ಳುವಂತೆ ಶಿಬಿರದಲ್ಲಿದ್ದ ಮಕ್ಕಳಿಗೆ ಕರೆಕೊಟ್ಟರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಶಿವನಂಜಪ್ಪನವರು ಹಾಗೂ ಶ್ರೀ ನಾರಪ್ಪನವರು, ಎ.ಎಸ್.ಓ.ಸಿ. ಹಾಗೂ ಪ್ರೌಢಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಮಾರುತಿ ಶಂಕರ ರಾಯ್ಕರ್‌ರವರು ಹಾಜರಿದ್ದರು. ಶಿಬಿರದ ನಾಯಕರಾಗಿ ಶ್ರೀಮತಿ ಬಿ.ಡಿ. ಶಾಂತ ಹಾಗೂ ಶ್ರೀ ಶಂಕರ್, ಎ.ಎಸ್.ಓ.ಸಿ.ರವರು ಆಗಮಿಸಿದ್ದರು. ಕಾರ್ಯಕ್ರಮ ದಲ್ಲಿ ಹೊಸಕೋಟೆ ತಾಲ್ಲೂಕು ಸ್ಥಳೀಯ ಕಾರ್ಯದರ್ಶಿ ಯಾದ ಶರಣಪ್ಪ ಕಾಂಬಳಿಯವರು ಸ್ವಾಗತಿಸಿದರು. ಹಾಗೂ ಮುರಾರ್ಜಿ ವಸತಿ ಶಾಲೆ ಸೂಲಿಬೆಲೆಯ ಸ್ಕೌಟ್ ಶಿಕ್ಷಕರಾದ ಶ್ರೀ ತೀರ್ಥಲಿಂಗಪ್ಪನವರು ವಂದಿಸಿದರು.

ದಿನಾಂಕ 22-1-2003ರಂದು ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಸೂಲಿಬೆಲೆ ಗ್ರಾಮ ಪಂಚಾಯತಿ ಸದಸ್ಯರಾದ ಶ್ರೀ ಜನಾರ್ದನ್ ರೆಡ್ಡಿಯವರು ವಹಿಸಿದ್ದರು. ಸಮಾರಂಭದ ಮುಖ್ಯ ಅತಿಥಿಗಳಾಗಿ ಹೊಸಕೋಟೆ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಸಿ. ನಾಗರಾಜನ್‌ರವರು ಹಾಗೂ ಕ್ಷೇತ್ರ ಸಂಪನ್ಮೂಲ ಸಮನ್ವಯಾಧಿಕಾರಿಗಳಾದ ಎಸ್. ರಮೇಶ್‌ರವರು ಆಗಮಿಸಿ, ಪ್ರತಿ ಶಾಲೆಯಲ್ಲಿ ಸ್ಕೌಟ್ ಮತ್ತು ಗೈಡ್ ದಳಗಳನ್ನು ತೆರೆಯುವಂತೆ ತಿಳಿಸುತ್ತಾ ಮಕ್ಕಳಲ್ಲಿ ಶಿಸ್ತನ್ನು ಬೆಳೆಸಿಕೊಳ್ಳಲು ಕರೆ ಕೊಟ್ಟರು. ಈ ಪರೀಕ್ಷಾ ಶಿಬಿರದಲ್ಲಿ 104 ಸ್ಕೌಟ್ಸ್ ಹಾಗೂ 46 ಗೈಡ್ಸ್, ಒಟ್ಟು 150 ಮಕ್ಕಳು ಹಾಜರಾಗಿದ್ದರು. ಈ ಸಮಯದಲ್ಲಿ ವಿವಿಧ ತಾಲ್ಲೂಕುಗಳಿಂದ ಆಗಮಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕ-ಶಿಕ್ಷಕಿಯರು ಹಾಜರಿದ್ದರು. ವಿವೇಕಾನಂದ ಶಾಲೆಯ ವೃತ್ತಿ ಶಿಕ್ಷಕರಾದ ಕೆ. ಜವರಯ್ಯನವರು ಸಭೆಗೆ ಸ್ವಾಗತಿಸಿದರು. ಹಾಗೂ ಹೊಸಕೋಟೆ ತಾಲ್ಲೂಕು ಸ್ಥಳೀಯ ಕಾರ್ಯದರ್ಶಿಗಳಾದ ಶರಣಪ್ಪ ಕಂಬಳಿಯವರು ವಂದಿಸಿದರು.



ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ ಮತ್ತು ಗೈಡ್ ಮಕ್ಕಳು

## ದಕ್ಷಿಣ ಕನ್ನಡ ಜಿಲ್ಲೆ

### ಗಣರಾಜ್ಯೋತ್ಸವದ ಪಥಸಂಚಲನದಲ್ಲಿ ಪ್ರಥಮಸ್ಥಾನ ಪಡೆದ ಮಂಗಳೂರಿನ ಸ್ಕೌಟ್ ತಂಡ



ಗಣರಾಜ್ಯೋತ್ಸವದಂದು ಮಂಗಳೂರಿನ ನೆಹರೂ ಮೈದಾನದಲ್ಲಿ ನಡೆದ ಪಥಸಂಚಲನದಲ್ಲಿ ಪ್ರಥಮ ಸ್ಥಾನ ಗಳಿಸಿದ ಸಂತ ಥೆರೆಸಾ ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ಸ್‌ಗಳು, ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಬಿ. ರಮಾನಾಥ ರೈ, ಶಾಸಕರುಗಳಾದ ಶ್ರೀ ಯು.ಟಿ. ಫರೀದ್, ಶ್ರೀ ಯೋಗೀಶ್ ಭಟ್, ಜಿಲ್ಲಾಧಿಕಾರಿ ಶ್ರೀ ಎ.ಕೆ. ಮೊನ್ನಪ್ಪ, ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಗೋನಾಳ್ ಭೀಮಪ್ಪ, ಮೇಯರ್ ಶ್ರೀ ಶಶಿಧರ ಹೆಗ್ಡೆ, ಜಿಲ್ಲಾ ಐ.ಜಿ. ಶ್ರೀ ಧರ್ಮಪಾಲ ನೇಗಿ, ಎಸ್ಪಿ ಸೀಮಂತ್ ಕುಮಾರ್ ಸಿಂಗ್, ವಿದ್ಯಾಂಗ ಉಪ ನಿರ್ದೇಶಕರಾದ ಶ್ರೀ ಜೋಸೆಫ್, ಶಿಕ್ಷಣಾಧಿಕಾರಿ, ಶ್ರೀ ಹನುಮಂತಪ್ಪ, ಕೆ. ಆನಂದ, ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ಇರ್ವಿನ್ ಡಿ. ಕುನ್ಹಾ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತೆ ಡಾ|| ಸೂಧನ್, ಜಿಲ್ಲಾ ಸಂಘಟನಾ ಆಯುಕ್ತ ಕೆ.ಎಂ.ಕೆ. ಮಂಜುನಾಡಿಯವರೊಂದಿಗಿದ್ದಾರೆ.

## ಪುತ್ತೂರು ತಾಲ್ಲೂಕು

17 ಮತ್ತು 18 ಜನವರಿ 2003ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ತಾಲ್ಲೂಕು ರ್‍ಯಾಲಿಯು ಮೌಂಟನ್ ವ್ಯೂ ಆಂಗ್ಲ ಮಾಧ್ಯಮ ಶಾಲೆ ಸಾಲ್ಮರ ಇಲ್ಲಿ ವಿಜೃಂಭಣೆಯಿಂದ ಜರುಗಿತು.

ಜನವರಿ 17ರಂದು ಪೂರ್ವಾಹ್ನ 10.30ಕ್ಕೆ ತಾಲ್ಲೂಕು ರ್‍ಯಾಲಿಯನ್ನು ಪುರಸಭಾ ಅಧ್ಯಕ್ಷರಾದ ಶ್ರೀ ಸೂತ್ರಬೆಟ್ಟು ಜಗನ್ನಾಥ ರೈಯವರು ಉದ್ಘಾಟಿಸಿದರು. ಅನ್ಸಾರುದ್ದೀನ್ ಎಜುಕೇಷನ್ ಟ್ರಸ್ಟ್ ಅಧ್ಯಕ್ಷರಾದ ಶ್ರೀ ಉಸ್ಮಾನ್ ಹಾಜಿಯವರು ಅಧ್ಯಕ್ಷತೆ ವಹಿಸಿದ್ದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಕೆ. ಗಣಪತಿ ನಾಯಕ್‌ರವರು ಸ್ವಾಗತಿಸಿ ಕಾರ್ಯದರ್ಶಿ ಎಚ್. ಶ್ರೀಧರ ರೈ ವಂದಿಸಿದರು. ಡಾ| ಎಂ.ಕೆ. ಶ್ರೀಶಕುಮಾರ ಪ್ರಾಸ್ತಾವಿಕ ಭಾಷಣ ಮಾಡಿದರು. ರ್‍ಯಾಲಿಯ ನಾಯಕ ಎನ್. ಶಿವಾನಂದ ರ್‍ಯಾಲಿಯ ಚಟುವಟಿಕೆಗಳನ್ನು ವಿವರಿಸಿದರು. ಈ ರ್‍ಯಾಲಿಯಲ್ಲಿ ಸ್ಕೌಟ್ಸ್ 180, ಗೈಡ್ಸ್ 188, ಕಬ್ಸ್ 90, ಬುಲ್‌ಬುಲ್ 82, ರೋವರ್ಸ್, ರೇಂಜರ್ಸ್ 52 ಶಿಕ್ಷಕ ವರ್ಗ 48 ಹೀಗೆ ಒಟ್ಟು 600 ಮಂದಿ ಸಕ್ರಿಯವಾಗಿ ಭಾಗವಹಿಸಿರುತ್ತಾರೆ.

ಅಪರಾಹ್ನ 4.30ಕ್ಕೆ ಭವ್ಯವಾದ ನಗರ ಮೆರವಣಿಗೆಯನ್ನು ಪುತ್ತೂರು ನಗರ ಠಾಣೆಯ ಇನ್ಸ್‌ಪೆಕ್ಟರ್ ಆಫ್ ಪೋಲೀಸ್ ಶ್ರೀ ವಿದ್ಯಾಶಂಕರ ಉದ್ಘಾಟಿಸಿ ಶುಭ ಹಾರೈಸಿದರು. ಭವ್ಯವಾದ ಮೆರವಣಿಗೆ ಅರುಣಾ ಚಿತ್ರಮಂದಿರದಿಂದ ಬೊಳ್ವಾರು ತನಕ ಜರುಗಿತು. ವಿವೇಕಾನಂದ ರೋವರ್ಸ್ ರೇಂಜರ್ಸ್‌ರವರ ಬ್ಯಾಂಡ್ ವಾದನ ಆಕರ್ಷಣೀಯ ವಾಗಿತ್ತು. ಬಳಿಕ ಶ್ರೀ ರಾಮಕೃಷ್ಣ ಹೆಮ್ಮೆಕ್ಕಳ ಪ್ರೌಢಶಾಲೆಯ ವಿದ್ಯಾರ್ಥಿಗಳಿಂದ ಎರಡು ಬೀದಿ ನಾಟಕಗಳನ್ನು ಪ್ರದರ್ಶಿಸಲಾಯಿತು. ಭವ್ಯ ಶಿಬಿರಾಗ್ನಿಯನ್ನು ಅನ್ಸಾರುದ್ದೀನ್ ಟ್ರಸ್ಟ್‌ನ ಶ್ರೀ ಫಲೂಲ್ ಹಾಜಿ ಉದ್ಘಾಟಿಸಿದರು. ವಿವಿಧ ದಳದವರು ಆಕರ್ಷಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಿದರು.

## ಧಾರವಾಡ ಜಿಲ್ಲೆ

"ಸ್ಕೌಟ್ ಗೈಡ್ ತರಬೇತಿಯು ಮಕ್ಕಳ ಜೀವನಕ್ಕೆ ಅವಶ್ಯವಾದ ಶಿಕ್ಷಣವು" ಎಂದು ಜಿಲ್ಲಾ



ದಿ. 8.1.03ರಂದು ಸಸ್ಯಚೇತನ ಜಿಲ್ಲಾತರಬೇತಿ ಕೇಂದ್ರ ದಡ್ಡಿ ಕಮಲಾಪುರದಲ್ಲಿ ಸ್ಕೌಟ್ಸ್ ಗೈಡ್ಸ್ ಮಕ್ಕಳಿಗಾಗಿ ನಡೆದ ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಜಿ.ಪಂ.ಮು.ಕಾ.ನಿ. ಅಧಿಕಾರಿಗಳಾದ ಶ್ರೀ ಕೆ.ಎನ್. ನಿಂಗಪ್ಪನವರು ಮಾತನಾಡುತ್ತಿರುವರು. ಎಂ.ಎಂ. ಲೋಂಡೆ, ಎಂ.ಜಿ. ಭಿಲ್ಲೆ, ಆಶಾ ಬೆಣ್ಣೆ, ಪ್ರಭಾ ಲೋಂಡೆ, ಪ್ರೇಮಾ ಮಂಗಳೂರ ಉಪಸ್ಥಿತರಿರುವರು.

ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಾದ ಶ್ರೀ ಕೆ.ಎಸ್. ನಿಂಗಪ್ಪ ಇವರು ದಿನಾಂಕ 8ರಂದು ಜಿಲ್ಲೆಯ ಸ್ಕೌಟ್ ಗೈಡ್ ಮಕ್ಕಳಿಗೆ ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪ್ರದಾನ ಮಾಡುತ್ತ ನುಡಿದರು. ಮಕ್ಕಳಿಗೆ ಅತಿ ಅವಶ್ಯವಿರುವ ಶಿಕ್ಷಣದಲ್ಲಿ ಸ್ಕೌಟ್ ಗೈಡ್ ತರಬೇತಿಯೂ ಒಂದಾಗಿದೆ. ಇಲ್ಲಿ ಪಡೆಯುವ ಶಿಕ್ಷಣವು ಅವರ ನಿಜಜೀವನದಲ್ಲಿ ಅವರಿಗೆ ಉತ್ತಮ ಅನುಭವ ತಂದುಕೊಡುತ್ತದೆಂದು ಹೇಳಿದರು.

ದಿನಾಂಕ 5.1.03ರಿಂದ 9.1.03ರವರೆಗೆ ಸಸ್ಯಚೇತನ ಜಿಲ್ಲಾ ತರಬೇತಿ ಕೇಂದ್ರ ದಡ್ಡಿ ಕಮಲಾಪುರದಲ್ಲಿ ಜಿಲ್ಲೆಯ ಏಳನೆಯ ವರ್ಗದ ಐದೂವರೆನೂರು ಸ್ಕೌಟ್ಸ್ ಗೈಡ್ಸ್ ಮಕ್ಕಳಿಗಾಗಿ ನಡೆದ ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪ್ರದಾನ ತರಬೇತಿಯಲ್ಲಿ ದಿನಾಂಕ 8ರಂದು ಪ್ರಶಸ್ತಿ ವಿತರಣೆ ಮಾಡಲಾಯಿತು. ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಶುರುವಾಗಿ, ಜಿಲ್ಲಾ ಚೀಫ್ ಕಮೀಶನರ್ ಎಂ.ಎಂ. ಲೋಂಡೆಯವರು ಸ್ವಾಗತ ಬಯಸಿದರು. ಎಂ.ಜಿ. ಭಿಲ್ಲೆಯುವರು ವಂದಿಸಿದರು. ಸಹಕಾರ್ಯದರ್ಶಿ ಪ್ರಭಾ ಲೋಂಡೆ ಕಾರ್ಯಕ್ರಮ ಸಂಯೋಜನೆ ಮಾಡಿದರು.

## ಶಿವಮೊಗ್ಗ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ, ಶಿವಮೊಗ್ಗದ ತಾಲ್ಲೂಕು ಮಟ್ಟದ ರ್‍ಯಾಲಿಯು ದಿನಾಂಕ 18-01-03ರಂದು ಬೆಳಿಗ್ಗೆ ಶಿವಮೊಗ್ಗ ನಗರದ ವೀರಶೈವ ಕಲ್ಯಾಣ ಮಂದಿರದ ಆವರಣದಲ್ಲಿ ಶ್ರೀಮತಿ ಬಿ.ಪಿ. ಚಂದ್ರಮ್ಮ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶಿವಮೊಗ್ಗ, ಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಶ್ರೀ ಹೆಚ್.ಆರ್. ಉಮೇಶ್ ಆರಾಧ್ಯ, ಕಾರ್ಯಾಧ್ಯಕ್ಷರು, ಸ್ಥಳೀಯ ಸಂಸ್ಥೆ, ಶಿವಮೊಗ್ಗ, ಇವರುಗಳ ಉಪಸ್ಥಿತಿಯಲ್ಲಿ ಆರಂಭವಾಯಿತು. ಈ ಮೇಳದಲ್ಲಿ ಒಟ್ಟು 640 ಮಕ್ಕಳು (ಕಬ್ಸ್, ಸ್ಕೌಟ್ಸ್, ಗೈಡ್ಸ್, ಬುಲ್ ಬುಲ್ಸ್) ಭಾಗವಹಿಸಿದ್ದರು.

ಈ ರ್‍ಯಾಲಿಯಲ್ಲಿ ಸಾಹಸ ಚಟುವಟಿಕೆ, ಸ್ನೇಹಮಿಲನದ ಆಟ, ಪಥಸಂಚಲನ ಮುಂತಾದ ಕಾರ್ಯಕ್ರಮಗಳನ್ನು ನಡೆಸಲಾಯಿತು. ಸಂಜೆ ಭವ್ಯ ಶಿಬಿರಾಗ್ನಿ ಕಾರ್ಯಕ್ರಮವನ್ನು ಶ್ರೀ ಡಿ.ಬಿ. ಬಸವರಾಜ್, ಛೇರ್‌ಮೆನ್, ಎಸ್.ಡಿ.ಜಿ.ಐ.ಎಫ್ ಪ್ರೈ. ಲಿ. ಮಾಚೇನಹಳ್ಳಿ ಇವರು ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀ ಕೆ.ಎಂ. ವಸಂತಕುಮಾರ್, ಚಾರ್ಟೆಡ್ ಅಕೌಂಟೆಂಟ್, ಶಿವಮೊಗ್ಗ ಇವರು ಭಾಗವಹಿಸಿದ್ದರು. ಸ್ಕೌಟ್ಸ್, ಗೈಡ್ಸ್ ಮಕ್ಕಳು ಈ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಸಂತೋಷದಿಂದ ನಲಿದಾಡಿದರು.

ದಿನಾಂಕ 19-1-2003ರಂದು ಬೆಳಿಗ್ಗೆ ಪರಮಪೂಜ್ಯ ಆಚಾರ್ಯ ಭಗವಾನ್ ಶ್ರೀ ನಿತ್ಯೋದಯ ಸಾಗರ್ ಸೂರಿಸ್ವರ್‌ಜೀ ಮಾರಾ

ಸಾಹೇಬ್ ಗುರೂಜಿಯುವರ ದಿವ್ಯ ಸಾನಿಧ್ಯದಲ್ಲಿ ಸರ್ವಧರ್ಮ ಪ್ರಾರ್ಥನೆಯನ್ನು ಹಮ್ಮಿಕೊಳ್ಳಲಾಗಿತ್ತು. ಎಲ್ಲಾ ಮಕ್ಕಳು ಶಿವಮೊಗ್ಗದಲ್ಲಿರುವ ಪುಟಾಣಿ ರೈಲಿನಲ್ಲಿ ಮಹಾತ್ಮಾ ಗಾಂಧಿ ಉದ್ಯಾನವನ್ನು ಒಂದು ಸುತ್ತು ಪ್ರಯಾಣ ಮಾಡಿ ಹರ್ಷಿತರಾಗಿರುತ್ತಾರೆ.

ಮುಕ್ತಾಯ ಸಮಾರಂಭದ ಸಂದರ್ಭದಲ್ಲಿ ವಿಶೇಷ ಆಹ್ವಾನಿತರಾಗಿ ಶ್ರೀ ಕೆ. ತಿಮ್ಮಪ್ಪ, ನಿವೃತ್ತ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್)ರವರು ಆಗಮಿಸಿದ್ದರು. ಇವರಿಗೆ ಸನ್ಮಾನ ಮಾಡಿ ಗೌರವಿಸಲಾಯಿತು. ಶ್ರೀ ಟಿ.ವಿ ನಾರಾಯಣಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು, ಪ್ರೊಫೆಸರ್ ಎ.ಎಸ್. ಚಂದ್ರಶೇಖರ್, ಜಿಲ್ಲಾ ಸ್ಕೌಟ್ಸ್ ಆಯುಕ್ತರು ಮತ್ತು ಶ್ರೀಮತಿ ಭಾರತೀ ಚಂದ್ರಶೇಖರ್, ಜಿಲ್ಲಾ ಗೈಡ್ ಆಯುಕ್ತರು ಇವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಈ ಸಮಾರಂಭದ ಅಧ್ಯಕ್ಷತೆಯನ್ನು ಸ್ಥಳೀಯ ಸಂಸ್ಥೆಯ ಕಾರ್ಯಾಧ್ಯಕ್ಷರಾದ ಶ್ರೀ ಹೆಚ್.ಆರ್. ಉಮೇಶ್ ಆರಾಧ್ಯರವರು ವಹಿಸಿದ್ದರು. ರ‍್ಯಾಲಿಯ ನಿರ್ದೇಶಕರಾಗಿ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಎಂ.ಜಿ. ಶಿವಕುಮಾರ್‌ರವರು ಕೆಲಸ ನಿರ್ವಹಿಸಿದರು ಮತ್ತು ಸಹ ನಿರ್ದೇಶಕರಾಗಿ ಶ್ರೀ ಸಿ. ಸುಬ್ರಹ್ಮಣ್ಯಂ ಕೆಲಸ ನಿರ್ವಹಿಸಿದರು. ಸಹಾಯಕರಾಗಿ ಜಿಲ್ಲಾ ಸಂಘಟನಾಧಿಕಾರಿ ಶ್ರೀ ಬಿ.ಎಂ. ಜಯಾಚಾರ್, ಶ್ರೀ ಆರ್. ನಾಗರಾಜ್, ಶ್ರೀ ಆರ್. ರಂಗಪ್ಪ ಇವರುಗಳು ಕಾರ್ಯ ನಿರ್ವಹಿಸಿದರು.

## ತುಮಕೂರು ಜಿಲ್ಲೆ

ಭಾರತ್ ಸ್ಕೌಟ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಹುತಾತ್ಮರ ದಿನಾಚರಣೆಯ ಪ್ರಯುಕ್ತ ಗಾಂಧೀಜಿ ಜೀವನ ಮತ್ತು ಆದರ್ಶ ಕುರಿತಂತೆ ಉಪನ್ಯಾಸ ಕಾರ್ಯಕ್ರಮವನ್ನು ದಿನಾಂಕ 30.1.03 ರಂದು ಸ್ಕೌಟ್ ಗೈಡ್ ಭವನ, ತುಮಕೂರು ಇಲ್ಲಿ ಏರ್ಪಡಿಸಲಾಗಿದ್ದು ಶ್ರೀ ಬಾ.ಹ. ರಮಾದೇವಿ ಮತ್ತು ಸಿದ್ಧರಾಮಯ್ಯ ನವರು ಉಪನ್ಯಾಸ ನೀಡಿದರು. ಕಾರ್ಯಕ್ರಮದಲ್ಲಿ ಶ್ರೀ ಬಿ.ಆರ್. ವೇಣುಗೋಪಾಲಕೃಷ್ಣ (ಸ್ಕೌಟ್ ಆಯುಕ್ತರು), ಎಲ್ಲಾ ಎ.ಡಿ.ಸಿ. ಗಳು, ಜಿಲ್ಲಾ ಸಂಘಟನಾ ಆಯುಕ್ತರು ಮತ್ತು ಎಲ್ಲಾ ಪದಾಧಿಕಾರಿಗಳು ಪಾಲ್ಗೊಂಡಿದ್ದರು.

## ಕೊರಟಗೆರೆ ತಾಲ್ಲೂಕು

ದಿ. 01.01.03ರಂದು ಹೊಸವರ್ಷದ ಸುಸಂದರ್ಭದಲ್ಲಿ ಪದವಿಪೂರ್ವ ಕಾಲೇಜು, ಕೊರಟಗೆರೆಯ ಪ್ರೌಢಶಾಲಾ ವಿಭಾಗದಲ್ಲಿ 2002-03ನೇ ಸಾಲಿನಲ್ಲಿ ನೂತನವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಕಛೇರಿಯನ್ನು ಪದವಿಪೂರ್ವ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಎಸ್. ಕೃಷ್ಣಯ್ಯನವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.

ಸಮಾರಂಭದಲ್ಲಿ ಕಾಲೇಜಿನ ಉಪನ್ಯಾಸಕರು, ಶಾಲಾ ಶಿಕ್ಷಕ, ಶಿಕ್ಷಕಿಯರು, ಸುಮಾರು 50 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಮವಸ್ತ್ರದೊಡನೆ ಹಾಜರಿದ್ದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ಸ್ ಸಂಘಟನಾ ಆಯುಕ್ತರಾದ ಶ್ರೀ ಎಂ.ಎಚ್. ವೀರಶ್ಯಾಮಪ್ಪನವರು ಭಾಗವಹಿಸಿದ್ದರು.



ತುಮಕೂರು ಜಿಲ್ಲಾಮಟ್ಟದ ಮೇಳವನ್ನು ಶ್ರೀ ಶಿವಕುಮಾರನಾಥ ಸ್ವಾಮೀಜಿಯವರು ಉದ್ಘಾಟಿಸುತ್ತಿರುವುದು. ಶ್ರೀ ಎಂ.ಡಿ. ಲಕ್ಷ್ಮೀನಾರಾಯಣ, ಶಾಸಕರು, ತುರುವೇಕೆರೆ, ಶ್ರೀ ಹೆಚ್.ಬಿ. ನಂಜೇಗೌಡ, ಮಾಜಿ ಶಾಸಕರು, ಶ್ರೀಮತಿ ಆಶಾ ಪ್ರಸನ್ನಕುಮಾರ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ವೇಣುಗೋಪಾಲಕೃಷ್ಣ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀ ಡಿ.ಹೆಚ್. ಧನಪಾಲ್, ಅಧ್ಯಕ್ಷರು, ಎಲ್.ಎ. ತುರುವೇಕೆರೆ, ಇವರನ್ನು ಚಿತ್ರದಲ್ಲಿ ಕಾಣಬಹುದು.

# ಬೀದರ್ ಜಿಲ್ಲೆ



### ದಳಗಳ ಉದ್ಘಾಟನೆ

ದಿನಾಂಕ 27-1-03ರಂದು ರಾಜರ್ಷಿ ರಾಮಾ ವಸತಿ ಶಾಲೆ ನೌಬಾದ-ಬೀದರ ಈ ಶಾಲೆಯಲ್ಲಿ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಘಟಕ ಉದ್ಘಾಟಿಸಲಾಯಿತು. ಈ ಕಾರ್ಯಕ್ರಮಕ್ಕೆ ಬೀದರ್ ಜಿಲ್ಲಾ ಉಪ ನಿರ್ದೇಶಕರಾದ ಹಫಿಜುಲ್ಲಾ ಷಹಿಫ್, ಡಿ.ಓ.ಸಿ. ಡಾ|| ಹಣಮಂತರಾವ ಭರಶಟ್ಟಿ, ಶಾಲಾ ಅಧ್ಯಕ್ಷರಾದ ಮುರಳೀಧರರಾವ ಕಾಳೆ ಹಾಗೂ ಪ್ರಾಂಶುಪಾಲರಾದ ಶ್ರೀ ವೆಂಕಟೇಶ್ವರರಾವ ಮೈಂದೇ ಇವರೆಲ್ಲ ಉಪಸ್ಥಿತರಿದ್ದರು.

# ಬಿಜಾಪುರ ಜಿಲ್ಲೆ

ಮಾನ್ಯ ಬಿ.ಎಸ್. ಪಾಟೀಲ (ಸಾಸನೂರ) ಕೃಷಿ ಮಾರುಕಟ್ಟೆ ಸಚಿವರು ಭಾಗವಹಿಸಿದ್ದರು. ಗಣರಾಜ್ಯೋತ್ಸವದಲ್ಲಿ ಸಾರ್ವಜನಿಕ ಧ್ವಜಾರೋಹಣದ ಅಂಗವಾಗಿ ಜಿಲ್ಲಾ ಅಂಬೇಡ್ಕರರ ಕ್ರೀಡಾಂಗಣದಲ್ಲಿ ಪೋಲೀಸ್, ಹೋಮ್‌ಗಾರ್ಡ್, ಎನ್‌ಸಿಸಿ ಘಟಕಗಳೊಂದಿಗೆ ಸ್ಕೌಟ್, ಗೈಡ್ಸ್‌ಗಳು ಭಾಗವಹಿಸಿದ್ದರು.



ಜಿಲ್ಲೆಯ ಬಿಜಾಪುರ ಸ್ಥಳೀಯ ಸಂಸ್ಥೆ ವತಿಯಿಂದ ದಿನಾಂಕ 22.12.02ರಿಂದ 31.12.2002ರವರೆಗೆ ಶ್ರೀ ಅಮೋಘಸಿದ್ಧ ದೇವಸ್ಥಾನ, ಮುಮ್ಮೆಟ್ಟಿ ಗುಡ್ಡ, ಅರಕೇರಿ ಇಲ್ಲಿ ಸ್ಕೌಟ್ ಗೈಡ್ ನಾಯಕ-ನಾಯಕಿಯರ ಮೂಲ ತರಬೇತಿ ಶಿಬಿರವು ನಡೆಯಿತು. ಶಿಬಿರದಲ್ಲಿ ಸ್ಕೌಟ್ ವಿಭಾಗಕ್ಕೆ 60 ಮಂದಿ, ಗೈಡ್ ವಿಭಾಗಕ್ಕೆ 20 ಮಂದಿ ಅಭ್ಯರ್ಥಿಗಳು ಪಾಲ್ಗೊಂಡಿದ್ದರು. ಸ್ಕೌಟ್ ವಿಭಾಗದಲ್ಲಿ 2 ಶಿಬಿರಗಳು ನಡೆದಿದ್ದು ನಾಯಕರಾಗಿ ಶಿಬಿರ 1ಕ್ಕೆ ಶ್ರೀ ಎಸ್.ಎಸ್. ನಿಂಬಾಳ ಶಿಬಿರ 2ಕ್ಕೆ ಶ್ರೀ ಪಿ. ಮಂಜುನಾಥ ಹಾಗೂ ಗೈಡ್ ವಿಭಾಗಕ್ಕೆ ಶ್ರೀಮತಿ ಸುಷ್ಮಾ ಗುಡ್ಡದ ಇವರುಗಳು ಯಶಸ್ವಿಯಾಗಿ ಕಾರ್ಯ ನಿರ್ವಹಿಸಿದರು.

## ಬಾಗಲಕೋಟೆ ಜಿಲ್ಲೆ



ಬಾಗಲಕೋಟೆ ಜಿಲ್ಲೆಯ ನವನಗರದಲ್ಲಿ ಜಿಲ್ಲಾ ಆಡಳಿತ ಕಛೇರಿ ನಿವೇಶನ ಹಕ್ಕುಪತ್ರ ಪ್ರಧಾನ ಸಂದರ್ಭ. ಮಾನ್ಯ ಶ್ರೀ ಎಸ್.ಆರ್. ಪಾಟೀಲ, ಸಂಸ್ಥೆಯ ಅಧ್ಯಕ್ಷರು, ಹಾಗೂ ಶಾಸಕರು, ಶ್ರೀ ಜಿ.ಎನ್. ಪಾಟೀಲ, ಸಂಸ್ಥೆಯ ಉಪಾಧ್ಯಕ್ಷರು ಹಾಗೂ ಬಾಗಲಕೋಟೆ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಉಪಸ್ಥಿತರಿದ್ದರು.

## ಚಿತ್ರದುರ್ಗ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ, ಚಿತ್ರದುರ್ಗ ಇವರ ಆಶ್ರಯದಲ್ಲಿ ದಿನಾಂಕ 22-12-02ರಂದು ಜಿಲ್ಲೆಯ ಕಬ್ಸ್, ಬುಲ್‌ಬುಲ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಪಟಾಲಂ ನಾಯಕರ ಮೂರು ದಿನಗಳ ಪೂರ್ವಭಾವಿ ತರಬೇತಿ ಶಿಬಿರವನ್ನು ಚಿತ್ರದುರ್ಗ ತಾಲ್ಲೂಕಿನ ಭೀಮಸಮುದ್ರದಲ್ಲಿ ಏರ್ಪಡಿಸಲಾಗಿತ್ತು. ಮುಕ್ತಾಯ ಸಮಾರಂಭದಲ್ಲಿ ಲೋಕಸಭಾ ಸದಸ್ಯರಾದ ಶ್ರೀ ಜಿ. ಮಲ್ಲಿಕಾರ್ಜುನಪ್ಪನವರು ಭಾಗವಹಿಸಿ ಪ್ರಶಸ್ತಿ ಪತ್ರಿಕೆ ವಿತರಿಸಿದರು. ನಾರಾಯಣಪ್ಪ, ಜಿಲ್ಲಾ ಆಯುಕ್ತರು ಹಾಗೂ ಜಿಲ್ಲಾ ಕಾರ್ಯದರ್ಶಿ ಶ್ರೀ ಮಹಮದ್ ಮಾಯಿನುದ್ದೀನ್ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ರಾಜ್ಯ ಆಯುಕ್ತರು (ಸ್ಕೌಟ್ಸ್) ಆದ ಶ್ರೀ ಸಿ.ಆರ್. ಮೊಹಮ್ಮದ್ ಜಹೀರುದ್ದೀನ್ ಇವರು ಭಾಗವಹಿಸಿದ್ದರು.






## Bangalore South District

# ROUTE MARCH ON PULSE POLIO AWARENESS






Sri Kondajji B. Shanmukhappa, State Chief Commissioner received by the Scous & Guides.

*Sri Kondajji B. Shanmukhappa, State Chief Commissioner, Inaugurated the Rally and called upon the Scouts and Guides to participate in the Community Service Programme for the well being of the people and earn a good name in the society. Sri A. Devegowda, President, Local Association presided over the Inaugural Function.*

### Chamarajpet L.A.

*The Chamarajpet Local Association organised the L.A. Rally and an Awareness Route March on Pulse Polio Programme on 1st February 2003 at the Government Junior College Grounds, Old Fort, Bangalore. Nearly 700 Cubs, Bulbuls, Scouts and Guides were participated in the Rally.*



Scouts & Guides are moving on the Route March.



Sri Syed Jalil, Chairman, Health Committee, BMP addressing. Sri Chinnaswamy Reddy, State Secretary, Sri P. Palani, Dist. Commissioner (S) and other are seen.

*An Awareness Route March on Pulse Polio Programme was flagged off by Sri M. A. Chelliah, Headquarters Commissioner (PR). The Cubs, Bulbuls, Scouts, Guides and the Adult Leaders participated in the Route March.*

*Sri ChinnaswamyReddy, State Secretary delivered the valedectory address and briefed about the participation of the 20th World Scout Jamboree held at Thailand. He urged upon the Scouts and Guides to keep the*

public places clean and be an example to the other people living in the community.

The Chief Guest - Sri Syed Jalil, Councellor and Chairman, Health Committee, BMP felicitated Sri K. Thimmappa, Former State Organising Commissions (Scout) and Sri Chandrashekarachar, Former Secretary, L.A. and presented the shield to the wining units participated in various activities. He appriciated the Scouts and Guides for their community participation.

Smt. Uma Nagesh, Assistant District Commissioner (Guide) felicitated Miss. P. Saroja, former State Organising Commissioner (Guide), Sri M.K. Khan, District Training Commissioner (Scout) presented the Medal of Merit to Sri Sathyanarayana, Scout Master and others.

Sri P. Palani, District Commissioner (Scout) presided over the valedectory function. He appealed to the Heads of Institutions to introduce the Scouts and Guides activities in their institutions for the benefits of students.

Sri T.K. Narayanaswamy, ALT(S), coordinated the activities. Sri M.S. Satheesh, Secretary, Local Association made the necessary arrangements for the success of the Rally. The office-bearers of L.A. and D.A. attended the programme.

## ಉತ್ತರಕನ್ನಡ ಜಿಲ್ಲೆ



ದಿನಾಂಕ 25-1-03ರಿಂದ 1-2-03ರವರೆಗೆ ಕೆ.ಪಿ.ಸಿ. ಗೇರುಸಪ್ಪಾದಲ್ಲಿ ನಡೆದ ಸ್ಕೌಟ್ ಮಾಸ್ಟರ್ಸ್ ಎಡ್ವಾನ್ಸ್ ತರಬೇತಿ ಶಿಬಿರದಲ್ಲಿ ಶಿಬಿರಾರ್ಥಿಗಳು ನಿರ್ಮಿಸಿದ ಪಿರಾಮಿಡ್ ಟವರನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಡಾ. ಜಿ. ಜಿ. ಸಭಾಹಿತ, ಜಿಲ್ಲಾ ಆಯುಕ್ತೆ ಶ್ರೀಮತಿ ಲಲಿತಾ ಹೆಗ್ಡೆ, ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಜಿ. ಅಬ್ರಹಾಂ ಹಾಗೂ ಶಿಬಿರಾರ್ಥಿಗಳನ್ನು ಕಾಣಬಹುದು.

## *Key to Quiz No. I*

1. *A dealer in old Jewellery and a member of Government intelligence departments.*

2. *Kim got the lessons of noticing and remembering small details.*

3. *He was the same injured man and a member of Govenment intelligence service.*

4. *Mafeking is in South Africa.*

5. *The boys and Mafeking were Mafeking Cadct Corps.*

6. *Living in Gods open air among the hills and trees.*

7. *Exploring new places everyday going farther in a field.*

8. *Know how to put up tent or hut, how to lay and light a fire, to cook the food to make a bridge or a raft, finding way at night in a strange country.*

9. *Woodcraft is the knowledge of animals and nature, be able to see the tracks and other small signs.*

10. *Because the Knights followed their rules very much like the present scout promise and law. They were committed.*

## ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮ



ದಿನಾಂಕ 9.2.2003ರಂದು ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಆರನಕಟ್ಟೆ ಶ್ರೀ ವಾಂ. ವಿ. ಗ್ರಾ. ಪ್ರೌ. ಶಾಲೆಯ ಗೈಡ್ಸ್ ಮಕ್ಕಳು ಪಲ್ಸ್ ಪೋಲಿಯೋ ಲಸಿಕಾ ಕಾರ್ಯಕ್ರಮದಲ್ಲಿ ಸ್ವಯಂ ಸೇವಕರಾಗಿ ಭಾಗವಹಿಸಿದರು.



100

20⚜7

A Hundred years of Promise
in 2007, Scouting will celebrate its Centenary

**Not to take things too seriously, but to make the best of what you have got, and to look on life as a game, and the world as a play ground. And let your actions and thoughts be directed by love.**

\- BADEN POWELL

Regd as News Paper (Magazine) No : **CPMG/KA/BGW-549/2002-05**



ಕರ್ನಾಟಕ

ಸ್ಕೌಟ್ ಮತ್ತು ಗೈಡ್

KARNATAKA SCOUT & GUIDE

News Magazine

BOOK-POST

If not delivered please return to :

**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002

***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.